# ಧರ್ಮಶಾಸ್ತ್ರ ಯಾವುದು?



ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

***www.thraithashakam.org***





# ಧರ್ಮಶಾಸ್ತ್ರ ಯಾವುದು?


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**

---






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : June-2016

ಪ್ರತಿಗಳು : 1000 **ಬೆಲೆ. 50/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಟಿ–ಸೃಷ್ಟಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮೀನಾರಾಯಣಾಚಾರಿ–09440556968.
ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನಂ. –38, ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನಂ. –38, ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಧರ್ಮಶಾಸ್ತ್ರ ಯಾವುದು? 09

ಜಗತ್ತಿನಲ್ಲಿ ವಿಚಕ್ಷಣಾ ಜ್ಞಾನವಿಲ್ಲದ ಯಾವ ಜೀವರಾಶಿಗು ಧರ್ಮಶಾಸ್ತ್ರ ಎನ್ನುವುದರೊಂದಿಗೆ ಕೆಲಸವಿಲ್ಲ. ಪೂರ್ತಿ ವಿಶ್ವದಲ್ಲಿ ವಿಚಕ್ಷಣೆ ಹೊಂದಿದವನು ಮನುಷ್ಯ ಒಬ್ಬನೇ. ಆದ್ದರಿಂದ ಮನುಷ್ಯನಾದ ಪ್ರತಿಯೊಬ್ಬನಿಗು ಧರ್ಮಶಾಸ್ತ್ರ ಎಂದರೆ ಏನೊ ತಿಳಿದಿರಬೇಕು. ಧರ್ಮಶಾಸ್ತ್ರ ಮನುಷ್ಯನಿಗೆ ಆಹಾರವನ್ನು ಕೊಡುತ್ತದಾ, ಆದಾಯವನ್ನು ಕೊಡುತ್ತದಾ? ಯಾವ ಆದಾಯವಿಲ್ಲದ್ದನ್ನು ಕುರಿತು ಮನುಷ್ಯನಿಗೇನು ಅವಶ್ಯಕತೆಯೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವನ್ನು ನೋಡಿದರೆ ಧರ್ಮಶಾಸ್ತ್ರದಿಂದ ಒಂದು ಹೊತ್ತು ಆಹಾರವಾಗಲಿ, ಒಂದು ರೂಪಾಯಿ ಆದಾಯವಾಗಲಿ ಇರುವುದಿಲ್ಲ. ಹಾಗೆಂದು ಕೂಳಿಗೆ ಕೆಲಸಕ್ಕೆ ಬಾರದ ಧರ್ಮಗಳಿಂದ ನಮಗೇನು ಕೆಲಸವೆಂದು ಯಾರೂ ಅಂದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ! ಧರ್ಮ ಮನುಷ್ಯನಿಗೆ ಆದಾಯವನ್ನು ಆಹಾರವನ್ನು ಕೊಡುವುದಿಲ್ಲವಾಗಲಿ, ಅದು ನೇರವಾಗಿ ಮನುಷ್ಯನೊಂದಿಗೆ ಸಂಬಂಧಹೊಂದಿದೆ. ಧರ್ಮ ಎನ್ನುವುದು ಮನುಷ್ಯನ ಜೀವನದಲ್ಲಿ ಒಂದು ಭಾಗವಾಗಿದೆ. ಆದರೂ ಆ ವಿಷಯ ಎಲ್ಲರಿಗೂ ತಿಳಿಯದು.

ಒಬ್ಬ ಮನುಷ್ಯ ಧರ್ಮವನ್ನು ತಿಳಿದು ಜೀವಿಸಿದರೆ ಅದನ್ನು ಸಕ್ರಮವಾದ ಜೀವನ ಅನ್ನಬಹುದು. ಹಾಗಲ್ಲದೆ ಧರ್ಮವೆಂದರೆ ಏನೊ ತಿಳಿಯದೆ, ಸ್ವಲ್ಪವೂ ಧರ್ಮವಿಲ್ಲದ ಜೀವನವನ್ನು ಕಳೆದರೆ ಅದನ್ನು ಲೋಪಭೂಯಿಷ್ಟವಾದ ಜೀವನ ಅನ್ನುತ್ತೇವೆ. ಆತನದು ಸಕ್ರಮವಾದ ಜೀವನ ಅಲ್ಲವೆಂದು ಹೇಳಬಹುದು. ಮನುಷ್ಯನ ಜೀವನದಲ್ಲಿ ಧರ್ಮ ಎನ್ನುವುದು ವಾಹನಕ್ಕೆ ಲೈಟಿನಂತಹದ್ದು. ಕತ್ತಲಲ್ಲಿ ಪ್ರಯಾಣಿಸುವ ವಾಹನಕ್ಕೆ (ಕಾರಿಗೆ) ಲೈಟು ಎಷ್ಟು ಅವಶ್ಯಕವೊ ಧರ್ಮ ಸಹಾ ಮನುಷ್ಯನಿಗೆ ಅಷ್ಟೇ ಅವಶ್ಯಕ. ವಾಹನಕ್ಕಿರುವ ಲೈಟು ವಾಹನವನ್ನು ನಡೆಸಲಿಲ್ಲ, ನಡೆಸುವುದಕ್ಕೆ ಶಕ್ತಿಯನ್ನು ಕೊಡುವುದಿಲ್ಲ. ವಾಹನ ಲೈಟು ಇಲ್ಲದಿದ್ದರೂ ನಡೆಯಬಲ್ಲದು. ವಾಹನ ಎಷ್ಟು ಬೆಲೆಯುಳ್ಳದ್ದಾದರೂ ಕತ್ತಲಲ್ಲಿ ದಾರಿ ತಿಳಿಯದೆ ಸಕ್ರಮವಾದ ಮಾರ್ಗದಲ್ಲಿ ನಡೆಯದೆ ದಾರಿತಪ್ಪಿ ನಡೆಯುತ್ತದೆ. ಹಾಗೆ ನಡೆಯುವುದರಿಂದ ಪ್ರಯಾಣ ಅಡೆತಡೆಗಳಿಂದ ಕೂಡಿಕೊಂಡಿರುವುದಾಗಿ,

ಉಬ್ಬು ತಗ್ಗುಗಳಲ್ಲಿ ಆಘಾತಗಳಿಗೆ ಗುರಿಯಾಗುತ್ತಾ ನಡೆಯಬೇಕಾಗಿ ಬರುತ್ತದೆ. ಎಲ್ಲಾದರೂ ದೊಡ್ಡಕುಣಿಯಾಗಲಿ, ದೊಡ್ಡಕಲ್ಲಾಗಲಿ ಎದುರಾದರೆ ಆಘಾತ ನಡೆದು ಅಲ್ಲಿಗೆ ವಾಹನವೊಂದರ ಪ್ರಯಾಣ ನಿಂತುಹೋಗುತ್ತದೆ. ಅದೇ ವಿಧವಾಗಿ ಮನುಷ್ಯ ಎಷ್ಟು ಧನಿಕನಾದರೂ ಜೀವನ ಮೇಲ್ನೋಟಕ್ಕೆ ಚೆನ್ನಾಗಿಯೆ ನಡೆಯುತ್ತಿರುತ್ತದೆ. ಆದರೆ ಧರ್ಮವಿಲ್ಲದ ಮನುಷ್ಯನಲ್ಲಿ ಶಾಂತಿ ಇರುವುದಿಲ್ಲ. ಆತನ ಜೀವನ ಅಸಂತೃಪ್ತಿ, ಆವೇದನೆಗಳು ಅಡೆತಡೆಗಳಿಂದ ಸಾಗುತ್ತಿರುತ್ತದೆ. ಎಂದಾದರೂ ಜೀವನದಲ್ಲಿ ದೊಡ್ಡ ಸಂಘಟನೆ ಎದುರಾದರೆ ಧರ್ಮ ತಿಳಿಯದ ಮನುಷ್ಯ ಅದರಿಂದ ಸುಧಾರಿಸಿಕೊಳ್ಳುವುದಿಲ್ಲ. ಜೀವಿಸುವುದಕ್ಕಿಂತ ಮರಣಿಸುವುದೆ ಒಳ್ಳೆಯದೆಂದುಕೊಳ್ಳುವನು. ಯಾವಾಗಲೊ ಒಂದುಬಾರಿ ದಾರಿಯಿಲ್ಲದೆ ವಾಹನ ನಿಂತುಹೋದಾಗೆ, ಧರ್ಮವಿಲ್ಲದ ಮನುಷ್ಯ ಎಂದೋ ಒಂದುಸಲ ಜೀವನದ ಗುರಿಯನ್ನು ಸೇರಲಾರದೆ, ದಾರಿ ತಿಳಿಯದ ಅಗಮ್ಯಗೋಚರ ಸ್ಥಿತಿಯಲ್ಲಿ ಜೀವನವನ್ನೇ ಸಾಕುಮಾಡುತ್ತಾನೆ.

ಈ ದಿನ ಬಹಳಜನ ತಮ್ಮ ಧರ್ಮವನ್ನು ತಿಳಿಯದ ಸ್ಥಿತಿಯಲ್ಲಿ ಬದುಕುತ್ತಾ, ತನಗೆ ಎಲ್ಲಾ ಸಕ್ರಮವಾಗಿ ಇವೆಯೆಂದು ಎಂದುಕೊಳ್ಳುತ್ತಿರುತ್ತಾನೆ. ಹಗಲು ಲೈಟು ಇಲ್ಲದಿದ್ದರೂ ಪ್ರಯಾಣಿಸುವ ವಾಹನಕ್ಕೆ, ಕತ್ತಲಲ್ಲಿ ರಾತ್ರಿಸಮಯ ತಪ್ಪದೆ ಲೈಟು ಅಗತ್ಯವೆಂದು ಅಂದುಕೊಳ್ಳಲಾರರು. ಹಗಲಿನಲ್ಲಿ ಲೈಟು ತನ್ನಲ್ಲಿ ಒಂದು ಭಾಗವೆಂದು ವಾಹನಕ್ಕೆ ತಿಳಿಯದಹಾಗೆ, ಮನುಷ್ಯನಿಗು ಸಹಾ ಧರ್ಮ ತನ್ನ ಜೀವನದಲ್ಲಿ ಒಂದು ಭಾಗವೆಂದು ತಿಳಿಯದಸ್ಥಿತಿಯಲ್ಲಿ ಬಹಳಜನ ಬದುಕುತ್ತಿದ್ದಾರೆ. ಜೀವನದಲ್ಲಿ ಮಾರ್ಗದರ್ಶಕವಾದ ಲೈಟಿನಂತಹದ್ದು ಧರ್ಮ. ಧರ್ಮವೇನೊ ತಿಳಿಯದೆ ಧರ್ಮವೆಂದರೆ ಅರ್ಥವೇನು? ಎನ್ನುವ ಪರಿಸ್ಥಿತಿಯಲ್ಲಿ ಈ ದಿನ ಮನುಷ್ಯ ಇದ್ದಾನೆ. ಕೆಲವರಾದರೆ ಇದೇನು ಇದುಯಾವುದೊ ಹೊಸಮಾತು ಎಂದು ಅನ್ನುತ್ತಿದ್ದಾರೆ. ಧರ್ಮವೆಂದರೆ ಅರ್ಥವೇನಾದರೂ ಇರಬಹುದಾಗಲಿ, ಅದು ಇಲ್ಲದಿದ್ದರೆ ಮನುಷ್ಯ ಮನುಷ್ಯನೇ ಅಲ್ಲವೆಂದು ತಿಳಿದ ದೇವರು ಮನುಷ್ಯನನ್ನು ಹುಟ್ಟಿಸಿದ ಪಾಪಕ್ಕೆ, ಆತನೆ ಧರ್ಮವನ್ನು

ಕುರಿತು ಮನುಷ್ಯನಿಗೆ ಹೇಳಬೇಕಾಗಿ ಬಂದಿದೆ. ದೇವರು ಹಾಗೆ ಶ್ರಮಪಟ್ಟು ನಮ್ಮ ಹತ್ತಿರಕ್ಕೆ ಬಂದು ಧರ್ಮವಿದು ಎಂದು ಹೇಳಿದರೂ, ನಮಗೆ ಹಣದಿಂದಾಗಲಿ ಧರ್ಮದಿಂದಾಗಲಿ, ಕೆಲಸವಿಲ್ಲ ಎನ್ನುತ್ತಿದ್ದಾರೆ. ಹಣ ಇಲ್ಲದಿದ್ದರೆ ಬದುಕಲಾರೆವಾಗಲಿ, ಧರ್ಮ ಇಲ್ಲದಿದ್ದರೆ ಬದುಕಲಾರೆವಾ ಎಂದು ತಿರುಗಿ ಪ್ರಶ್ನಿಸುತ್ತಿದ್ದಾರೆ. ಕಜ್ಜಿನಾಯಿ ಮಾಂಸವಿಲ್ಲದ ಮೂಳೆಯನ್ನು ಕಡಿಯುತ್ತಾ ಆಹಾ! ಎಷ್ಟು ರುಚಿಯಾಗಿದೆ ಎಂದು ಅಂದುಕೊಂಡಂತೆ, ಕರ್ಮದಿಂದಿರುವ ಮನುಷ್ಯ ಧರ್ಮವಿಲ್ಲದ ಜೀವನವನ್ನು ಕಳೆಯುತ್ತಾ ಆಹಾ! ಜೀವನ ಎಷ್ಟು ಚೆನ್ನಾಗಿದೆ ಎಂದುಕೊಳ್ಳುತ್ತಿದ್ದಾನೆ. ನಾಯಿಗೆ ತಾನು ಕಡಿಯುತ್ತಿರುವ ಮೂಳೆ ಯಾವ ಸಾರವಿಲ್ಲದೆಂದು ತಿಳಿಯದಹಾಗೆ, ಮನುಷ್ಯನಿಗೆ ತಾವು ಕಳೆಯುತ್ತಿರುವ ಜೀವನ ಯಾವ ಸಾರ ಇಲ್ಲದೆಂದು, ನಿರರ್ಥಕವಾದುದೆಂದು ತಿಳಿಯದಂತಿದ್ದಾನೆ.

ಮಾಂಸವಿಲ್ಲದ ಮೂಳೆಯನ್ನು ಕಡಿಯುವ ನಾಯಿಗೆ, ಮೂಳೆ ಚುಚ್ಚಿಕೊಂಡು ತನ್ನ ಬಾಯಲ್ಲಿ ಗಾಯವಾಗಿ ರಕ್ತ ಬರುತ್ತಿದ್ದರೆ, ತನ್ನ ರಕ್ತವನ್ನೆ ತಾನು ರುಚಿ ನೋಡುತ್ತಾ ಅದೆಲ್ಲವೂ ಮೂಳೆಯಲ್ಲಿನ ರುಚಿಯೇ ಎಂದುಕೊಂಡು, ಮಾಂಸವಿರುವ ಮೂಳೆಯನ್ನು ತಿನ್ನುವ ನಾಯಿಯನ್ನು ನೋಡಿ, ತನ್ನ ಮೂಳೆಯನ್ನು ಅದೆಲ್ಲಿ ಕಸಿದುಕೊಳ್ಳುತ್ತದೊ ಎಂದು ಪಕ್ಕಕ್ಕೆ ತಿರುಗಿಕೊಂಡು ಮರೆಯಲ್ಲಿ ಹೋದಹಾಗೆ, ಧರ್ಮವಿಲ್ಲದ ಜೀವನವನ್ನು ಕಳೆಯುವವರು ಧರ್ಮವಿರುವವನು, ಧರ್ಮವನ್ನು ತಿಳಿದವನು ಎದುರಾದರೆ ಅವನು ತನ್ನನ್ನು ಎಲ್ಲಿ ಕೆಡಿಸುತ್ತಾನೋ ಎಂದು ತಪ್ಪಿಸಿಕೊಂಡು ತಿರುಗುತ್ತಾರೆ.

ಇದಕ್ಕೆಲ್ಲ ಕಾರಣ ಧರ್ಮ ಎಂದರೆ ಏನೆಂದಾಗಲಿ, ಧರ್ಮವೊಂದರ ಬೆಲೆ ಏನೆಂದಾಗಲಿ ತಿಳಿಯದಿರುವುದೇ ಎಂದು ಅರ್ಥವಾಗುತ್ತಿದೆ. ಇದನ್ನೆಲ್ಲ ಗಮನಿಸಿದ ನಂತರ ಮಾನವನು ಧರ್ಮಕ್ಕೆ ದೂರವಾಗಿ ಬದುಕುತ್ತಿದ್ದಾನೆಂದು ತಿಳಿಯುತ್ತಿದೆ.

ಮನುಷ್ಯರಲ್ಲಿ ಬಡವನಿಂದ ಧನಿಕನವರೆಗೂ ಪಂಡಿತನಿಂದ ಪಾಮರನ ವರೆಗೂ, ಬೇವರ್ಷಿಯಿಂದ ಮಹರ್ಷಿವರೆಗೂ, ಅಜ್ಞಾನಿಯಿಂದ ಸ್ವಾಮೀಜಿಗಳವರೆಗೂ ಅನೇಕ ವಿಧಗಳ ಮನುಷ್ಯರು ಭೂಮಿಮೇಲೆ ಇದ್ದಾರೆ. ಭೂಮಿಮೇಲಿರುವ ಇಷ್ಟು ವಿಧಗಳ ಮನುಷ್ಯರಲ್ಲಿ ಧರ್ಮವನ್ನು ತಿಳಿದವರು ಎಷ್ಟುಜನರಿದ್ದಾರೆಂದು ಪ್ರಶ್ನಿಸಿಕೊಂಡು ನೋಡಿದಂತಾದರೆ, ಸಾಧಾರಣ ಮನುಷ್ಯರು ನಮಗೆ ಧರ್ಮ ಎಂದರೆ ಏನೊ ತಿಳಿಯದೆಂದು ಒಪ್ಪಿಕೊಂಡರೂ, ಪಂಡಿತರು, ಸ್ವಾಮೀಜಿಗಳು ನಮಗೆ ಧರ್ಮ ತಿಳಿದಿದೆಯೆಂದು, ಧರ್ಮದ ಪ್ರಕಾರವೇ ಪ್ರವರ್ತಿಸುತ್ತಿದ್ದೇವೆಂದು ಹೇಳುತ್ತಿದ್ದಾರೆ. ಅವರು ಹೇಳುವ ಮಾತು ನಿಜವೇ ಎಂದು ನಾವು ಒಪ್ಪಿಕೊಂಡರೂ ದೇವರು ಮಾತ್ರ ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ! ನಮ್ಮ ಲೆಕ್ಕದಲ್ಲಿ ಹೇಳಲಾದ ಧರ್ಮ ಬೇರೆ. ದೇವರ ಲೆಕ್ಕದಲ್ಲಿ ಹೇಳಲಾದ ಧರ್ಮಬೇರೆ. ಅವರಿಗೆ ತೋಚಿರುವುದೇ ಧರ್ಮ ಎಂದುಕೊಳ್ಳುವುದರಿಂದ, ನಾವು ಧರ್ಮವನ್ನು ತಿಳಿದವರೆಂಬ ಗರ್ವದಿಂದ ಇದ್ದಾರೆ. ಮನುಷ್ಯರು ಯಾರಿಗೆ ತೋಚಿರುವುದು ಅವರು ಧರ್ಮವೆಂದುಕೊಳ್ಳುವುದರಿಂದ ಮನುಷ್ಯರ ಲೆಕ್ಕದಲ್ಲಿ ಧರ್ಮ ಶಾಸ್ತ್ರಬದ್ಧವಾಗಿ ಇಲ್ಲದಂತೆ ಹೋಗಿ ಊಹಾ ಜನಿತವಾಗಿದೆ.

ಕೆಲವರ ಊಹೆಯಲ್ಲಿ ಮನುಷ್ಯ ನೀತಿಯಾಗಿ ನಡೆದುಕೊಳ್ಳುವುದೆ ಧರ್ಮವಾಗಿರುವಂತೆ ಅಂದುಕೊಳ್ಳುತ್ತಿದ್ದಾರೆ. ಇನ್ನೂ ಕೆಲವರು ದಾನಗಳನ್ನೇ ಧರ್ಮ ಎಂದುಕೊಳ್ಳುತ್ತಿದ್ದಾರೆ. ಕೆಲವರೇನೊ ಯಜ್ಞಗಳನ್ನು ಮಾಡುವುದೇ ಧರ್ಮವಾಗಿ ನಡೆದುಕೊಂಡಂತೆ ಎಂದು ಅಂದುಕೊಳ್ಳುತ್ತಿದ್ದಾರೆ. ಕೆಲವರು ನ್ಯಾಯವಾಗಿ ನಡೆದುಕೊಳ್ಳುವುದನ್ನು ಧರ್ಮವಾಗಿ ನಡೆದುಕೊಳ್ಳುವುದು ಎಂದುಕೊಳ್ಳುತ್ತಿದ್ದಾರೆ. ಕಳ್ಳ ಇತರರನ್ನು ದೋಚಿಕೊಳ್ಳುವುದೆ ಧರ್ಮವೆಂದು ಕೊಳ್ಳುತ್ತಿದ್ದಾನೆ. ವ್ಯಾಪಾರಿ ಎದುರಿಗಿರುವವನ ಅವಶ್ಯಕತೆಯನ್ನನುಸರಿಸಿ ಲಾಭ ತೆಗೆದುಕೊಳ್ಳುವುದರಲ್ಲಿ ತಪ್ಪಿಲ್ಲ, ಅದು ವ್ಯಾಪಾರವೊಂದರ ಧರ್ಮ ಎನ್ನುತ್ತಿದ್ದಾನೆ. ಕ್ಷತ್ರಿಯರು ಯುದ್ಧ ಮಾಡಿದರೂ ತಪ್ಪಿಲ್ಲ, ಯುದ್ಧದಲ್ಲಿ ಶತ್ರುಗಳನ್ನು ಸಾಯಿಸಿದರೂ ತಪ್ಪಿಲ್ಲ. ಇದು ಕ್ಷತ್ರಿಯರ ಸ್ವಧರ್ಮ ಎನ್ನುತ್ತಿದ್ದಾರೆ. ಹೀಗೆ ಕೊನೆಗೆ ಮನುಷ್ಯ

ತನಗೆ ಅನುಕೂಲವಾದುದೆಲ್ಲ ಸ್ವಧರ್ಮವೆಂದು, ಅನುಕೂಲವಿಲ್ಲದ್ದು ಪರಧರ್ಮವೆಂದು ಅನ್ನುತ್ತಿದ್ದಾನೆ. ಇಷ್ಟು ವಿಧಗಳಲ್ಲಿ ಯಾವುದು ಅಸಲಾದ ಧರ್ಮವೊ ತಿಳಿಯದಂತಾಗಿದೆ. ಭವಿಷ್ಯತ್ತಿನಲ್ಲಿ ಧರ್ಮವನ್ನು ಕುರಿತು ಇಂತಹ ಸಮಸ್ಯೆಗಳು ಏರ್ಪಡುತ್ತವೆಂದು ತಿಳಿದ ದೇವರು, ಸೃಷ್ಟ್ಯಾದಿಯಲ್ಲಿಯೇ ಧರ್ಮಗಳನ್ನು ಕುರಿತು ತಿಳಿಸಿದ್ದಾನೆ. ಆದರೆ ದೇವರು ತಿಳಿಸಿದ ಧರ್ಮಗಳು ಈದಿನ ಸಹಾ ಗ್ರಂಥರೂಪದಲ್ಲಿ ನಮ್ಮಮುಂದಿದ್ದರೂ, ಆ ಗ್ರಂಥಗಳನ್ನು ಮನುಷ್ಯ ಶ್ರದ್ಧೆಯಿಂದ ನೋಡುತ್ತಿಲ್ಲ. ಒಂದುವೇಳೆ ಯಾರಾದರೂ ದೇವರ ಗ್ರಂಥಗಳನ್ನು ನೋಡಿದರೂ, ಅದರಲ್ಲಿ ಹೇಳಿದ ಧರ್ಮಗಳನ್ನು ಮನುಷ್ಯ ಶ್ರದ್ಧಾಲೋಪದಿಂದ ಅರ್ಥಮಾಡಿಕೊಳ್ಳದೆ ಹೋಗುತ್ತಿದ್ದಾನೆ. ಸಾಧಾರಣ ಮನುಷ್ಯರು ಅರ್ಥಮಾಡಿ ಕೊಳ್ಳದೆಹೋದರು ಆಶ್ಚರ್ಯ ಇಲ್ಲವಾಗಲಿ, ನಾವು ಆಧ್ಯಾತ್ಮಿಕ ತಜ್ಞರೆನ್ನುವವರೂ, ನಾವು ದೇವರ ಜ್ಞಾನವನ್ನು ಬೋಧಿಸುವ ಬೋಧಕರನ್ನುವವರೂ, ದೊಡ್ಡ ಸ್ವಾಮೀಜಿಗಳಾಗಿ ಹೆಸರುವಾಸಿಯಾದವರೂ ದೇವರು ಹೇಳಿದ ಧರ್ಮಗಳನ್ನು ಬಿಟ್ಟು, ಧರ್ಮಗಳಲ್ಲದ ಅಧರ್ಮಗಳನ್ನು ಧರ್ಮಗಳಾಗಿ ಬೋಧಿಸುವುದು ಪೂರ್ತಿ ಆಶ್ಚರ್ಯವಾಗಿ ಇದೆ. ದೊಡ್ಡ ಬೋಧಕರೆ ಅಲ್ಲದೆ ದೈವ ಗ್ರಂಥಗಳಲ್ಲಿ ಸಹಾ ಮನುಷ್ಯರ ಬರಹಗಳು ಸೇರುವುದರಿಂದ ದೇವರ ಧರ್ಮಗಳ ಮುಸುಗಿನಲ್ಲಿ ಅಧರ್ಮಗಳು ಸೇರಿಹೋಗಿ ಧರ್ಮಗಳಾಗಿ ಹೇಳಲಾಗುತ್ತಿವೆ. ದೇವರು ಹೇಳಿದ ಧರ್ಮಶಾಸ್ತ್ರವನ್ನು ಬಿಟ್ಟು, ಮನುಷ್ಯರು ಹೇಳಿದ, ಮನುಷ್ಯರ ಹೆಸರುಗಳ ಮೇಲಿರುವ ಧರ್ಮಗಳನ್ನು ಹೇಳುವುದು ನಡೆಯುತ್ತಿದೆ.

ಧರ್ಮಶಾಸ್ತ್ರವನ್ನು ಮೊದಲು ದೇವರು ಭೂಮಿಮೇಲಕ್ಕೆ ಬರುವಹಾಗೆ ಮಾಡಿದ್ದಾನೆ. ದೇವರಿಗೆ ಹೊರತು ಧರ್ಮಶಾಸ್ತ್ರ ಯಾರಿಗೂ ತಿಳಿಯದು. ಆದ್ದರಿಂದ ದೇವರೇ ಮೊದಲು ಧರ್ಮಶಾಸ್ತ್ರವನ್ನು ಹೇಳುವುದು ನಡೆದಿದೆ. ಎಂದಿಗಾದರೂ ದೇವರು ಹೇಳಿರುವುದೇ ಧರ್ಮಶಾಸ್ತ್ರವಾಗುತ್ತದೆ ಆದರೆ, ಮನುಷ್ಯರು ಹೇಳಿರುವುದು ಧರ್ಮಶಾಸ್ತ್ರ ಅಲ್ಲ. ದೇವರು ಹೇಳಿದ ಧರ್ಮಗಳನ್ನು ಮನುಷ್ಯ ಹೇಳಬಹುದಾಗಲಿ, ಮನುಷ್ಯ ಸ್ವತಃವಾಗಿ ಧರ್ಮಗಳನ್ನು ಹೇಳಲಾರನು.

ಇನ್ನೊಂದು ವಿಶೇಷ ಏನೆಂದರೆ ದೇವರು ಹೇಳಿದ ಧರ್ಮಗಳು ಸಂಪೂರ್ಣವಾಗಿರುತ್ತವೆ. ಅದೇ ಧರ್ಮಗಳನ್ನು ಮನುಷ್ಯ ಪುನಃ ಬೋಧನೆಯಾಗಿ ಹೇಳಿದರೂ ಅವು ಅಸಂಪೂರ್ಣವಾಗಿರುತ್ತವೆ. ತಿಳುವಳಿಕೆಯುಳ್ಳವರು ಆ ವ್ಯತ್ಯಾಸವನ್ನು ಕಂಡುಹಿಡಿಯಬಹುದು. ದೇವರಿಂದ ಹೇಳಲಾದ ಧರ್ಮಗಳು ಪ್ರಕಾಶವಂತವಾಗಿ ಇರುತ್ತವೆ. ಅವುಗಳನ್ನೇ ಪುನಃ ಮನುಷ್ಯ ಹೇಳಿದರೂ ಅವು ಪ್ರಕಾಶವಂತವಾಗಿ ಕಾಣಿಸದೆ ತೇಜೊಹೀನವಾಗಿ ಕಾಣಿಸುತ್ತವೆ. ಆ ವ್ಯತ್ಯಾಸವನ್ನು ಎಲ್ಲರೂ ಗಮನಿಸಲಾರದೆ ಹೋಗಬಹುದು. ಗತ ಚರಿತ್ರೆಯಲ್ಲಿ ಕೆಲವರು ಪ್ರವಕ್ತರ ಹೆಸರುಗಳ ಪಕ್ಕದಲ್ಲಿ ಧರ್ಮಶಾಸ್ತ್ರ ಎಂದು ಬರೆಯಲಾಗಿದೆ. ಅದನ್ನನುಸರಿಸಿ ಅವು ಆ ಪ್ರವಕ್ತರು ಬರೆದ ಧರ್ಮಶಾಸ್ತ್ರಗಳೆಂದು ತಿಳಿದುಹೋಗುತ್ತಿದೆ. ಮನುಷ್ಯರು ಬರೆದ ಧರ್ಮಶಾಸ್ತ್ರಗಳನ್ನು ನಂಬದೆ ಹೋದರೂ, ಪ್ರವಕ್ತರು ಬರೆದ ಧರ್ಮಶಾಸ್ತ್ರಗಳನ್ನು ನಂಬಬಹುದಲ್ಲವೆ! ಎಂದು ಕೆಲವರು ಕೇಳಬಹುದು.

ದೇವರು ಹೇಳಿದ ಧರ್ಮಗಳನ್ನೇ ಮನುಷ್ಯ ಬೋಧನೆ ರೂಪದಲ್ಲಿ ಹೇಳಿದರೂ, ಅದು ಲೋಪಭೂಯಿಷ್ಟವಾಗಿ ಇರುವುದಕ್ಕೆ ಕಾರಣ ದೇವರು ಹೇಳಿರುವುದು ಹೇಳಿದಾಗೆ ಮನುಷ್ಯನಿಗೆ ಅರ್ಥವಾಗದಿರುವುದೆ ಎಂದು ಹೇಳಬಹುದು. ಒಂದುವೇಳೆ ಇರುವುದು ಇದ್ದಹಾಗೆ ಹೇಳುತ್ತಿದ್ದೇನೆಂದೆನಿಸಿದರೂ, ಮನುಷ್ಯನಿಗೆ ತಿಳಿಯದೆಯೇ ದೇವರ ಧರ್ಮಗಳಲ್ಲಿ ಸ್ವಲ್ಪ ಬದಲಾವಣೆ ಸ್ಥಳ ಮಾಡಿಕೊಂಡು ಅವುಗಳ ಬೆಲೆಗಳು ಅವುಗಳಿಗೆ ಇಲ್ಲದಂತೆ ಹೋಗುತ್ತದೆ. ಈ ವಿಷಯ ಅರ್ಥವಾಗುವುದಕ್ಕೆ ಒಂದು ಉದಾಹರಣೆಯನ್ನು ಹೇಳುತ್ತೇನೆ ನೋಡಿರಿ. ಒಬ್ಬ ಗುರುವು ದೇವರ ಜ್ಞಾನವನ್ನು ಬೋಧಿಸುತ್ತಾ ದೇವರ ಸೇವೆ ಮಾಡುತ್ತಿದ್ದನು. ಆತನು ಜ್ಞಾನವನ್ನು ಬೋಧಿಸುವುದೇ ದೇವರ ಸೇವೆಯಾಗಿ ಭಾವಿಸಿ ಧರ್ಮಬದ್ಧವಾಗಿ ಸೇವೆ ಮಾಡುತ್ತಿದ್ದನು. ಆತನ ಉದ್ದೇಶದಲ್ಲಿ ಬೋಧಿಸುವುದೇ ಸೇವೆ ಆಗಿರುವುದರಿಂದ, ಇತರರಿಂದ ಯಾವ ಲಾಭವನ್ನು ಆಸೆಪಡದೆ ದೇವರ ಜ್ಞಾನವನ್ನು ಬೋಧಿಸುತ್ತಿದ್ದನು. ದೇವರ ಜ್ಞಾನವೊಂದರ ಗೌರವಕ್ಕೆ ಭಂಗ

ಬಾರದಹಾಗೆ ಇರುವಂತೆ, ದೇವರ ಜ್ಞಾನಕ್ಕೆ ಗೌರವ ಕೈಗೂಡುವ ಹಾಗೆ, ಯುಕ್ತಾಯುಕ್ತ, ವಿಚಕ್ಷಣಾ ಜ್ಞಾನದಿಂದ ಪಾತ್ರಾಪಾತ್ರ ದಾನದ ಪ್ರಕಾರ ಇತರರಿಗೆ ಜ್ಞಾನದಾನ ಮಾಡುತ್ತಿದ್ದನು. ಜ್ಞಾನಕ್ಕೆ ಬೆಲೆ ಇರುವಹಾಗೆ ತನ್ನ ಹತ್ತಿರಕ್ಕೆ ಬಂದವರಿಗೆ ಮಾತ್ರವೇ ಜ್ಞಾನದಾನ ಮಾಡುತ್ತಿದ್ದನು. ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಶ್ರದ್ಧೆ ಇರುವವರಿಗೆ ಮಾತ್ರವೇ ಜ್ಞಾನವನ್ನು ಹೇಳುತ್ತಿದ್ದನು. ಜ್ಞಾನವಿರುವ ಸ್ಥಳಕ್ಕೇ ಅದನ್ನು ತಿಳಿದುಕೊಳ್ಳಬೇಕೆಂದುಕೊಂಡವನು ಬರಬೇಕೆಂದು, ಜ್ಞಾನ ಆತನ ಹತ್ತಿರಕ್ಕೆ ಹೋಗಬಾರದೆಂದು, ತಾನು ಎಲ್ಲಿಗೆ ಹೋಗದಂತೆ ತನ್ನ ಸಮೀಪಕ್ಕೆ ಬಂದವರಿಗೇ ಅದು ಪರಿಮಿತಿ ಸಮಯದಲ್ಲಿಯೇ ಜ್ಞಾನವನ್ನು ಬೋಧಿಸುತ್ತಿದ್ದನು. ಹಾಗಲ್ಲದೆ ಗುರುವೇ ಶಿಷ್ಯರ ಮನೆಹತ್ತಿರಕ್ಕೆ ಹೋಗಿ ಜ್ಞಾನ ಹೇಳುವುದು ಒಳ್ಳೆಯದಲ್ಲ, ಹಾಗೆ ಹೇಳುವುದರಿಂದ ಜ್ಞಾನವನ್ನು ಅಗೌರವಪಡಿಸಿದಂತಾ ಗುತ್ತದೆಂದು ಹೇಳುತ್ತಿದ್ದನು.

ಒಂದು ಕೆಲಸ ಮಾಡಿದರೆ ಅದು ಸೇವೆ ಆದರೂ ಆಗಬಹುದು, ಕೂಲಿ ಆದರೂ ಆಗಬಹುದು. ಅದರಪ್ರಕಾರ ತಾನು ಮಾಡುವ ಜ್ಞಾನಬೋಧನೆ ಎನ್ನುವ ಕಾರ್ಯ ಕೂಲಿ ಬರುವುದಾಗಿ ಇರಬಾರದು. ಆದಾಯವಿಲ್ಲದ ಸೇವೆಯಾಗಿರಬೇಕೆಂದು ಭಾವಿಸಿ ತಾನು ಹೇಳುವಬೋಧನೆಗೆ ಪ್ರತಿಫಲವಾಗಿ ಇತರರಿಂದ ಏನು ಆಸಿಸುವವನು ಅಲ್ಲ. ಇತರರು ತಮ್ಮಷ್ಟಕ್ಕೆ ತಾವು ಏನಾದರೂ ಕೊಡಬೇಕೆಂದುಕೊಂಡರೂ ಅದು ದೇವರಿಗೆ ಉಪಯೋಗಪಡುವುದಾಗಿ ಇರಬೇಕೆಂದು ಹೇಳುತ್ತಿದ್ದನು. "ನೀವು ನಮಗೆ ಜ್ಞಾನವನ್ನು ಹೇಳಿದಕ್ಕೆ ನಾವು ಹಣ ಕೊಡಬೇಕೆಂದುಕೊಂಡಿದ್ದೇವೆ ಎಂದು ಕೇಳಿದರೆ, ಅದಕ್ಕೆ ಉತ್ತರವಾಗಿ ನೀವು ಕೊಡುವ ಒಂದು ರೂಪಾಯಿಯಾಗಲಿ ದೇವರ ಜ್ಞಾನ ಪ್ರಚಾರ ಆಗುವು ದಕ್ಕೆ ಪ್ರತ್ಯಕ್ಷವಾಗಾಗಲಿ, ಪರೋಕ್ಷವಾಗಾಗಲಿ ಉಪಯೋಗವಾಗಬೇಕು. ಹಾಗೆ ದೇವರಿಗಲ್ಲದೆ ಮನುಷ್ಯನಾದ ನನಗೆ ಉಪಯೋಗಪಡಬಾರದೆಂದು" ಹೇಳುತ್ತಿದ್ದನು. ಆತನು ಯಾರನ್ನು ಹಣ ಕೇಳಲಿಲ್ಲ. ಯಾರಾದರೂ ಕೊಟ್ಟರೂ ಅದು ದೇವರ ಜ್ಞಾನಪ್ರಚಾರದಲ್ಲಿ ವಿನಿಯೋಗವಾಗುವಂತೆ ಮಾಡುತ್ತಿದ್ದನು.

ಇನ್ನೂ ಮುಖ್ಯವಾಗಿ ಸೇವೆ ವಿಷಯದಲ್ಲಿ ಏನು ಹೇಳುತ್ತಿದ್ದಾನೆಂದರೆ, ನೂರುರೂಪಾಯಿಗಳು ಖರ್ಚಿಟ್ಟು ದೇವರಿಗೆ ಪೂಜೆ ಮಾಡುವುದಕ್ಕಿಂತ ಒಂದು ರೂಪಾಯಿ ಖರ್ಚಿಟ್ಟು ದೇವರ ಜ್ಞಾನವನ್ನು ಪ್ರಚಾರ ಮಾಡೆಂದು ಹೇಳುತ್ತಿದ್ದನು. ಅಷ್ಟೇ ಅಲ್ಲದೆ "ದೇವರಿಗೆ ತನ್ನನ್ನು ಪೂಜಿಸುವುದು ಇಷ್ಟವಿಲ್ಲವೆಂದು, ತನ್ನ ಜ್ಞಾನವನ್ನು ಪ್ರಚಾರ ಮಾಡುವುದೇ ಆತನಿಗೆ ಇಷ್ಟವೆಂದು, ಆದುದರಿಂದ ದೇವರ ಜ್ಞಾನವನ್ನು ಪ್ರತ್ಯಕ್ಷವಾಗಾಗಲಿ, ಪರೋಕ್ಷವಾಗಾಗಲಿ ಪ್ರಚಾರ ಮಾಡುವುದರಲ್ಲಿ ಭಾಗಸ್ಥರಾಗಬೇಕೆಂದು" ಹೇಳುತ್ತಿದ್ದನು.

ದೇವರ ಜ್ಞಾನ ಪ್ರಚಾರ ಮಾಡುವುದಕ್ಕಿಂತ ಮಿಗಿಲಾದ ದೈವ ಆರಾಧನೆ ಇಲ್ಲವೆಂದು ಹೇಳುತ್ತಾ, ಅದೇ ಮನುಷ್ಯ ಅನುಸರಿಸಬೇಕಾದ ಮುಖ್ಯವಾದ ಧರ್ಮವೆಂದು ಹೇಳುವುದಲ್ಲದೆ, ತಾನು ಜ್ಞಾನಬೋಧನೆಯೇ ಮುಖ್ಯಧರ್ಮವಾಗಿ ತಿಳಿದು, ರಾತ್ರಿ ಹೊತ್ತು ಗಂಟೆ ಇಲ್ಲವೆ ಎರಡು ಗಂಟೆಗಳಿಗಿಂತ ಹೆಚ್ಚು ವಿಶ್ರಾಂತಿ ತೆಗೆದುಕೊಳ್ಳದೆ, ಹೆಚ್ಚುಕಾಲ ಜ್ಞಾನ ರಚನೆಗಳು ಮಾಡುತ್ತಾ ಸ್ವಲ್ಪ ಗ್ರಂಥರೂಪವಾಗಿ, ಸ್ವಲ್ಪ ಬೋಧನಾರೂಪವಾಗಿ ದೈವಸೇವೆ ಮಾಡುತ್ತಿದ್ದನು. ಯಾರಾದರೂ ತಾನು ಕೇಳದಿದ್ದರೂ ತಾವು ಸಹಾ ಸೇವೆ ಮಾಡಬೇಕೆಂದುಕೊಂಡಿದ್ದೇವೆಂದು, ಅಪರೂಪವಾಗಿ ಯಾರಾದರೂ ಹಣವನ್ನು ಕೊಡಬೇಕೆಂದುಕೊಂಡರೆ ಅದನ್ನು ದೇವರ ಹುಂಡಿಯಲ್ಲಿ ಹಾಕಿಸಿ, ನಂತರ ದೇವರ ಜ್ಞಾನ ಪ್ರಚಾರ ಸೇವೆಗೆ ವಿನಿಯೋಗಿಸುತ್ತಿದ್ದನು. ತನಗೆ ದೇವರ ಕಾರ್ಯಗಳು ಮಾಡುವುದರಲ್ಲಿ ಹಣ ಕಡಿಮೆ ಬಂದರೆ ಇತರರಿಂದ ಸಾಲದರೂಪದಲ್ಲಿ ತೆಗೆದುಕೊಂಡು ಅದಕ್ಕೆ ತಕ್ಕ ಬಡ್ಡಿಯನ್ನು ಕಟ್ಟುತ್ತಿದ್ದನು. ಈ ವಿಧವಾಗಿ ಎಷ್ಟೋ ಪದ್ಧತಿಯಾಗಿ ಮನುಷ್ಯ ದೈವ ಮಾರ್ಗದಲ್ಲಿ ಅನುಸರಿಸಬೇಕಾದ ಮುಖ್ಯ ಧರ್ಮ ದೈವಜ್ಞಾನವನ್ನು ಇತರರಿಗೆ ತಿಳಿಸುವುದೇ ಎಂದು ತಿಳಿದು, ಅದೇ ಕೆಲಸವನ್ನು ಧರ್ಮಕ್ಕೆ ವಿರುದ್ಧವಾಗದಂತೆ ಮಾಡುತ್ತಿದ್ದನು. ತನಗೆ ತಿಳಿದ ದೇವರ ಜ್ಞಾನವನ್ನು ಬೋಧಿಸುವುದೇ ಮನುಷ್ಯನಿಗೆ ಮುಖ್ಯ ಧರ್ಮವೆಂದು ಹೇಳಿರುವುದರಿಂದ ಆತನ ಹತ್ತಿರ ಜ್ಞಾನ ತಿಳಿದುಕೊಂಡವರಲ್ಲಿ ಇಬ್ಬರು ತಾವು ತಮ್ಮ ಗುರುವಿನ

ಮೂಲಕ ತಿಳಿದುಕೊಂಡ ಜ್ಞಾನವನ್ನು ಇತರರಿಗೆ ಹೇಳಿ ದೇವರ ಸೇವೆ ಮಾಡಬೇಕೆಂದುಕೊಂಡಿದ್ದಾರೆ. ಅದೇ ವಿಷಯವನ್ನೇ ತಮ್ಮ ಗುರುಗಳ ಹತ್ತಿರ ಕೇಳಿ ಅನುಮತಿ ಪಡೆಯಬೇಕೆಂದುಕೊಂಡಿದ್ದಾರೆ. ಅವರ ಮಾತುಗಳು ಕೇಳಿದ ಗುರು ಸಂತೋಷಪಟ್ಟು ಒಬ್ಬ ಭಕ್ತನಾಗಿ ಯಾರಾದರೂ ದೇವರ ಸೇವೆ ಮಾಡಬೇಕೆಂದುಕೊಂಡರೆ, ದೇವರ ಜ್ಞಾನಬೋಧನೆ ಮಾಡುವುದಕ್ಕಿಂತ ಮೀರಿದ ಸೇವೆ ಇಲ್ಲವೆಂದು ಅವರಿಗೆ ಹೇಳಿ, ಅವರನ್ನು ಆ ಕೆಲಸ ತಪ್ಪದೆ ಮಾಡೆಂದು ಉತ್ಸಾಹಪಡಿಸಿದ್ದಾನೆ. ತಮ್ಮ ಗುರು ಸಹಾ ಅನುಮತಿ ಕೊಡುವುದರಿಂದ ಅವರು ಅಂದಿನಿಂದ ದೈವಜ್ಞಾನವನ್ನು ಬೋಧಿಸುವುದು ಪ್ರಾರಂಭಿಸಿದ್ದಾರೆ.

ಹಾಗೆ ಅವರು ತಾವು ತಿಳಿದುಕೊಂಡ ಜ್ಞಾನವನ್ನು ಬೋಧಿಸುವುದು ಪ್ರಾರಂಭಿಸಿದ್ದಾರೆ. ತಮ್ಮ ಗುರು ಮಾತುಗಳ ರೂಪದಲ್ಲಿ ಹೇಳಿದ ಜ್ಞಾನವನ್ನು, ಮಾತುಗಳ ರೂಪದಲ್ಲಿಯೇ ಅಲ್ಲದೆ ಹಾಡುಗಳ ರೂಪದಲ್ಲಿಯೂ, ಪದ್ಯಗಳ ರೂಪದಲ್ಲಿಯೂ ಹೇಳುವುದಕ್ಕೆ ಆರಂಭಮಾಡಿದ್ದಾರೆ. ಆಗ ಗುರುಗಳು ಕೇವಲ ಮಾತುಗಳ ರೂಪದಲ್ಲಿ ಹೇಳಿದ ಜ್ಞಾನಕ್ಕಿಂತ ಹಾಡುಗಳ, ಪದ್ಯಗಳ ರೂಪದಲ್ಲಿ ಹೇಳಿದ ಜ್ಞಾನ ಕೇಳುವವರಿಗೆ ಚೆನ್ನಾಗಿ ಕಾಣಿಸಿದೆ. ಹಾಗೆ ಚೆನ್ನಾಗಿ ಕಾಣಿಸುವುದರಿಂದ ಕೇಳುವವರು ಗುರುಗಳಿಗಿಂತ ಶಿಷ್ಯರೆ ಚೆನ್ನಾಗಿ ಹೇಳುತ್ತಿದ್ದಾರೆಂದು ಅವರನ್ನು ಹೊಗಳಲು ಪ್ರಾರಂಭಿಸಿದ್ದಾರೆ. ಅದರಿಂದ ಇಬ್ಬರು ಶಿಷ್ಯರೂ ತಮ್ಮನ್ನು ತಾವು ದೊಡ್ಡದಾಗಿ ಭಾವಿಸಿಕೊಳ್ಳುವುದಕ್ಕೆ ಆರಂಭಿಸಿದ್ದಾರೆ. ಕೇಳುವವರು ಗುರುಗಳು ಹೇಳಿದ ಜ್ಞಾನವೇ ಅಲ್ಲವೆ! ಇವರು ಹೇಳುವುದು ಎಂದು ಅಂದುಕೊಳ್ಳದೆ ಇವರೆ ಸ್ವತಃವಾಗಿ ದೊಡ್ಡದಾಗಿ ಹೇಳಿದಂತೆ ಹೊಗಳಿದಾಗ, ಇಬ್ಬರು ಶಿಷ್ಯರು ಸಹಾ ಇದೆಲ್ಲವೂ ಗುರುಗಳು ತಿಳಿಸುತ್ತಿರುವ ಜ್ಞಾನ ಎಂದುಕೊಳ್ಳದೆ, ಪಕ್ಕದವರು ಹೊಗಳಿದಂತೆಲ್ಲ ತಮ್ಮನ್ನು ದೊಡ್ಡದಾಗಿ ಊಹಿಸಿಕೊಳ್ಳುವುದಕ್ಕೆ ಆರಂಭಿಸಿದ್ದಾರೆ. ಮೊದಲು ಪ್ರಾರಂಭಿಸಿದಾಗ ದೈವ ಜ್ಞಾನವನ್ನು ಬೋಧಿಸುವುದು ಧರ್ಮವೇ ಆದರೂ, ಅದು ಗುರುಗಳ ಹತ್ತಿರ ಮಾತ್ರ ಧರ್ಮವಾಗಿದ್ದೂ, ಇಬ್ಬರ ಶಿಷ್ಯರ ಹತ್ತಿರ ಮಾತ್ರ ಧರ್ಮ ಸ್ವಲ್ಪ

ಅಧರ್ಮವಾಗಿ ಮಾರ್ಪಡುವುದು ಆರಂಭವಾಗಿದೆ. ಆದರೂ ಜ್ಞಾನವನ್ನು ಬೋಧಿಸುವುದು ದೇವರ ಸೇವಾ ಧರ್ಮವಾಗಿ ಇಬ್ಬರು ಶಿಷ್ಯರು ಅಂದು ಕೊಳ್ಳುತ್ತಿದ್ದರೂ, ಅವರಿಗೆ ತಿಳಿಯದೆಯೇ ಧರ್ಮ ಸ್ವಲ್ಪಸ್ವಲ್ಪ ಬದಲಾಗುತ್ತಾ ಬಂದಿದೆ.

ಗುರುಗಳು ದೈವಜ್ಞಾನಕ್ಕೆ ಬೆಲೆಯನ್ನು ಕೈಗೂಡಿಸುವಹಾಗೆ ತನ್ನ ಹತ್ತಿರಕ್ಕೆ ಬರುವವರಿಗೆ ಮಾತ್ರ ಜ್ಞಾನವನ್ನು ಹೇಳುತ್ತಿದ್ದನು. ಆದರೆ ಶಿಷ್ಯರು ಕೇಳುವವರ ಹತ್ತಿರಕ್ಕೇ ಹೋಗಿ ಹೇಳುತ್ತಿದ್ದರು. ಬೋಧಿಸುವುದು ಸೇವಾ ಧರ್ಮವೇ ಆದರೂ ಕೇಳುವವರಿಗೆ ಕೇವಲವಾಗಿ ಕಾಣಲು ಪ್ರಾರಂಭಿಸಿದೆ. ಬಂದುಹೋಗುವ ಖರ್ಚುಗಳಿಗೆ ಹಣಕೊಟ್ಟು ನೂತನ ವಸ್ತ್ರಗಳನ್ನು, ದಕ್ಷಿಣೆ ಕೊಟ್ಟರೆ ಅವರೆ ಬಂದು ಹೇಳಿಹೋಗುತ್ತಾರೆಂಬ ಭಾವನೆಯೊಳಗೆ ಕೇಳುವವರು ಬಂದು, ಯಾವಾಗ ಅವಕಾಶವಿದ್ದರೆ ಆಗ ಜ್ಞಾನ ಹೇಳೆಂದು ಕರೆಯುತ್ತಿದ್ದರು. ಆಗ ಇವರು ಜ್ಞಾನವನ್ನು ಹೇಳುವುದು ಮುಖ್ಯ ಸೇವಾ ಧರ್ಮ ಅಲ್ಲವೆ! ಎಂದು ಅಲ್ಲಿಗೆ ಹೋಗಿ ಹೇಳುತ್ತಿದ್ದರು. ಆದರೆ ಅವರು ಕೊಡುವ ದಕ್ಷಿಣೆ ಹಣ, ಹೊಸ ಬಟ್ಟೆ, ಖರ್ಚುಗಳು ಎಲ್ಲಾ ತಮ್ಮನ್ನು ಗೌರವಿಸುವುದಕ್ಕಾಗಿಯೇ ಎಂದು ಅಂದುಕೊಳ್ಳುತ್ತಿದ್ದರು. ಆದರೆ ಈ ವಿಷಯಗಳು ಗುರುಗಳಿಗೆ ತಿಳಿದಿಲ್ಲ. ಇಬ್ಬರು ಶಿಷ್ಯರು ಸಹಾ ತಮಗೆ ಕೊಡುವ ಗೌರವ ಮರ್ಯಾದೆಗಳಾಗಲಿ, ಹಣದ ವಿಷಯವಾಗಲಿ ಗುರುಗಳಿಗೆ ತಿಳಿಯದ ಹಾಗೆ ಇಟ್ಟಿದ್ದಾರೆ. ಒಂದುವೇಳೆ ಗುರುಗಳಿಗೆ ತಿಳಿದರೆ ಜ್ಞಾನಕ್ಕೆ ಬೆಲೆ ಇರುವುದಿಲ್ಲವೆಂದು, ಜ್ಞಾನವೊಂದರ ಗೌರವವನ್ನು ಕಡಿಮೆಮಾಡಿದಂತಾಗುತ್ತದೆಂದು ಅನ್ನುತ್ತಾನೆಂದು ತಿಳಿಯದಹಾಗೆ ಇಟ್ಟಿದ್ದಾರೆ. ಈ ವಿಧವಾಗಿ ಹೇಡಿ ರುಚಿಯನ್ನು ತಿಳಿದ ನರಿ ವರಿಮಳ್ಳ ದಾರಿ ಹಿಡಿದಂತೆ, ಲಾಭಗಳ ರುಚಿ ತಿಳಿದ ಶಿಷ್ಯರು ಯಾರು ಕರೆದರೆ ಅವರ ಹತ್ತಿರಕ್ಕೆ ಹೋಗಿ ಜ್ಞಾನವನ್ನು ಹೇಳುವುದಕ್ಕೆ ತಯಾರಾಗಿದ್ದಾರೆ.

ಸ್ವಲ್ಪಕಾಲಕ್ಕೆ ಮೇಲಿರುವ ಗ್ರಹಗಳಲ್ಲಿ ಒಂದು ಇವರ ಪ್ರವರ್ತನೆ ಮೇಲೆ ನಿಘಾ ಇಟ್ಟಿದೆ. ಗುರುಗಳು ಎಷ್ಟೋ ಹೆಚ್ಚಿನದಾಗಿ ಜ್ಞಾನಕ್ಕೆ ಬೆಲೆಕೊಡುತ್ತಾ

ಪದ್ಧತಿಯಾಗಿ ಜ್ಞಾನವನ್ನು ಬೋಧಿಸುತ್ತಿದ್ದರೆ, ಆತನ ಶಿಷ್ಯರು ಜ್ಞಾನವನ್ನು ಊರೂರಿಗು ಹೋಗಿ ಮಾರುವುದು ಒಳ್ಳೆಯದಲ್ಲವೆಂದು, ಅವರಿಗೆ ತಕ್ಕ ಬುದ್ಧಿ ಹೇಳಬೇಕೆಂದುಕೊಂಡ ಗ್ರಹ ಸಮಯಕ್ಕೋಸ್ಕರ ಕಾದು ನೋಡುತ್ತಿತ್ತು. ಹಾಗೆ ಇರುವಾಗ ಒಬ್ಬ ಶಿಷ್ಯನು ಅಜ್ಞಾನದಿಂದ ಸ್ವಲ್ಪ ಬಾಯಿ ಜಾರಿ ಮಾತನಾಡುವುದು ನಡೆದಿದೆ. ಹೊರಗಿನ ಪ್ರಜೆಗಳಲ್ಲಿ ಗುರುಗಳಿಗಿಂತ ನಮಗೆ ಗೌರವ ಹೆಚ್ಚಾಗಿದೆ. ನಾವು ಇಂತಹ ಊರಿಗೆ ಹೋಗಿದ್ದರೆ ಗುರುಗಳಿಗಿಂತ ದೊಡ್ಡದಾಗಿ ನಮಗೆ ಮರ್ಯಾದೆ ಕೊಟ್ಟು, ಚೆನ್ನಾಗಿ ಗೌರವಿಸುವುದಲ್ಲದೆ ಒಳ್ಳೆಯ ಬಟ್ಟೆಗಳು ಸಹಾ ಕೊಟ್ಟಿದ್ದಾರೆ. ಆತನಿಗೆ ಬಾರದ ಲಾಭ, ಆತನಿಗೆ ಬಾರದ ಗೌರವ ನಮಗಿದೆಯೆಂದು ಇತರರ ಹತ್ತಿರ ತಮ್ಮನ್ನು ಗುರುವಿಗಿಂತ ದೊಡ್ಡದಾಗಿ ಹೇಳಿಕೊಳ್ಳುವುದು ನಡೆದಿದೆ. ಆಗ ಮೊದಲೆ ಅವರನ್ನು ಗಮನಿಸುತ್ತಿದ್ದ ಗ್ರಹ, ದೇವರ ಸೇವಾ ಧರ್ಮವನ್ನು ಅಧರ್ಮವಾಗಿ ಬದಲಾಯಿಸಿದವರ ಮೇಲೆ ಕೋಪಿಸಿಕೊಂಡು, ಆ ವಿಧವಾಗಿ ಮಾತನಾಡಿದ ಶಿಷ್ಯನನ್ನು ನೇರವಾಗಿ ಸಾಯಿಸುವುದು ನಡೆದಿದೆ. ಅದನ್ನು ನೋಡಿದ ಎರಡನೆ ಶಿಷ್ಯನು ಬುದ್ಧಿ ತಂದುಕೊಳ್ಳುತ್ತಾನೆಂದು ಬಿಟ್ಟಿದೆ.

ಸ್ವಲ್ಪಕಾಲ ಕಳೆದಾಗ ಗುರುಗಳ ಹತ್ತಿರಕ್ಕೆ ಬಂದು ಜ್ಞಾನವನ್ನು ತಿಳಿದುಕೊಳ್ಳುವ ಉಳಿದ ಶಿಷ್ಯರು ಸಹಾ ತಾವು ತಮ್ಮ ಊರುಗಳಲ್ಲಿಯೇ ಇದ್ದೂ, ತಮ್ಮ ಹತ್ತಿರಕ್ಕೇ ಬಂದು ಹೇಳುವ ತಮ್ಮ ಸಾಟಿಶಿಷ್ಯನನ್ನು ತಮ್ಮ ಹತ್ತಿರಕ್ಕೆ ಕರೆಸಿಕೊಂಡು, ಜ್ಞಾನವನ್ನು ಹೇಳಿಸಿಕೊಳ್ಳುವುದಕ್ಕೆ ಪ್ರಾರಂಭ ಮಾಡಿದ್ದಾರೆ. ಹಾಗೆ ಅಭ್ಯಾಸವಾದ ಅವರು ಇದೆಲ್ಲವು ತಮ್ಮ ಗುರುಗಳು ಹೇಳಿದ ಜ್ಞಾನವೇ ಅಲ್ಲವೆ! ಎಂದು ಅಂದುಕೊಳ್ಳದೆ, ಆಗ ಹೇಳಿದ ಶಿಷ್ಯನನ್ನೇ ಗುರುವಿಗಿಂತ ದೊಡ್ಡದಾಗಿ ಹೊಗಳುವುದು, ಗೌರವಿಸುವುದು ಮಾಡಲಾರಂಭಿಸಿದ್ದಾರೆ. ಇದೆಲ್ಲವು ಗಮನಿಸಿದರೆ ಜ್ಞಾನವನ್ನು ಬೋಧಿಸುವುದು ಮುಖ್ಯವಾದ ಸೇವಾ ಧರ್ಮವಾಗಿ ಹೇಳಿಕೊಂಡರೂ, ಕೊನೆಗೆ ಅದು ಸೇವೆಯಾಗಿ ಮೇಲ್ನೋಟಕ್ಕೆ ಕಾಣಿಸಿದರೂ, ಒಳಗೆ ಕೂಲಿಯಾಗಿ ಬದಲಾಗಲು ಪ್ರಾರಂಭವಾಗಿದೆ. ಮಾಡಿದ ಕೆಲಸಕ್ಕೆ ಪ್ರತಿಫಲಿತವನ್ನು ಹೊಂದುವುದು ಸೇವೆಯಲ್ಲ ಕೂಲಿಯೆಂದು ತಿಳಿಯದಂತೆ ಮಾಡಿ, ತಾವು ಸಕ್ರಮವಾಗಿ ಇರುವಂತೆ ಭ್ರಮೆಪಡಿಸಿದೆ.

ಜ್ಞಾನವನ್ನು ಬೋಧಿಸುವ ಒಳ್ಳೆಯಕೆಲಸವನ್ನು ಮಾಡಿದರೂ, ಗುರುಗಳು ಜ್ಞಾನವನ್ನು ಬೋಧಿಸೆಂದು ಅನುಮತಿ ಕೊಟ್ಟರೂ, ಜ್ಞಾನವನ್ನು ಬೋಧಿಸುವುದು ದೇವರ ಸೇವೆಯಲ್ಲಿ ಮುಖ್ಯ ಧರ್ಮ ಆದರೂ, ಗುರುಗಳು ಹೇಳಿದರೂ, ಮಾಡಿದರೂ, ಅದು ಪೂರ್ತಿ ಧರ್ಮವಾಗಿರುತ್ತಿತ್ತು. ಅದೇ ಶಿಷ್ಯರ ಹತ್ತಿರಕ್ಕೆ ಬರುವಷ್ಟರಲ್ಲಿ ಧರ್ಮ ಧರ್ಮವಾಗಿ ಅಲ್ಲದೆ ಮತ್ತೊಂದು ವಿಧವಾಗಿ ಬದಲಾಗಿಹೋಗಿದೆ. ಸೇವೆ ಹೋಗಿ ಕೂಲಿ ಆಗಿದೆ. ಯಾರಾದರೂ ಕೊಟ್ಟಿರುವ ಪ್ರತಿಯೊಂದನ್ನು ದೇವರ ಸೇವೆಗಾಗಿ ವಿನಿಯೋಗಿಸಬೇಕೆಂಬ ಸೂತ್ರವನ್ನು ಪಕ್ಕಕ್ಕಿಟ್ಟು, ತಮ್ಮ ಲಾಭಕ್ಕೋಸ್ಕರ, ತಮಗೆ ಉಪಯೋಗಪಡುವುದಕ್ಕೋಸ್ಕರ, ಜ್ಞಾನ ಹೇಳಿದ್ದಕ್ಕೆ ಇಷ್ಟು ಕೊಡಬೇಕೆಂದು, ಇತರರನ್ನು ಕೇಳಿ ತೆಗೆದುಕೊಳ್ಳುವ ಸ್ಥಿತಿ ಬರುವುದರಿಂದ, ಧರ್ಮ ಗುರು ಹತ್ತಿರ ಒಂದು ವಿಧವಾಗಿ ಶಿಷ್ಯರಹತ್ತಿರ ಇನ್ನೊಂದು ವಿಧವಾಗಿ ಜಾರಿಯಾಗುತ್ತಿದೆಂದು ಅರ್ಥವಾಗುತ್ತಿದೆ. ಇದೇ ವಿಧವಾಗಿ ದೇವರು ತಿಳಿಸಿದಾಗ ಧರ್ಮ ಸಂಪೂರ್ಣವಾಗಿ ಇದ್ದರೂ, ಅದನ್ನೇ ಮನುಷ್ಯರು ತಿಳಿಸಿದರೂ, ಸ್ವಲ್ಪ ಲೋಪದಿಂದ ಇರುತ್ತದೆ. ಆದ್ದರಿಂದ ದೇವರ ಜ್ಞಾನವನ್ನು ದೇವರೇ ತಿಳಿಸಬೇಕಾಗಿರುತ್ತದೆ. ದೇವರು ತಿಳಿಸಿದಾಗಲೇ ಅದು ಗೌರವಪ್ರದವಾಗಿ ಸಂಪೂರ್ಣತೆ ಹೊಂದಿರುತ್ತದೆ. ದೇವರು ತಿಳಿಸಿದ ನಂತರ ಅದನ್ನೇ ಮನುಷ್ಯ ಕಲಿತುಕೊಂಡು ಹೇಳಿದರೂ ಅದರಲ್ಲಿ ಸ್ವಲ್ಪ ಲೋಪ ಏರ್ಪಟ್ಟು, ಸಂಪೂರ್ಣ ಗೌರವಪ್ರದವಿಲ್ಲದಾಗಿರುತ್ತದೆ. ಮನುಷ್ಯನಲ್ಲಿನ ಮಾಯೆ ಹಾಗೆ ಮಾಡಿ, ದೇವರ ಧರ್ಮಗಳನ್ನು ದೇವರು ಹೊರತು ಇತರರು ತಿಳಿಸಲಾರರೆನ್ನುವಂತೆ ಮಾಡುತ್ತಿದೆ.

ಮೇಲಿನ ಉದಾಹರಣೆಯನ್ನನುಸರಿಸಿ ದೇವರ ಧರ್ಮಗಳು ಯಾವುದಾದರೂ ದೇವರು ತಿಳಿಸಬೇಕಾಗಿದ್ದೇ ಹೊರತು, ಮನುಷ್ಯರು ತಿಳಿಸಲಾರರೆಂದು, ತಿಳಿಸಿದರೂ ದಾರಿತಪ್ಪಿರುತ್ತದೆಂದು ತಿಳಿಯುತ್ತಿದೆ. ದೇವರು ಸ್ವತಃವಾಗಿ ಭಗವಂತನ ಅವತಾರವಾಗಿ ಬಂದು ಭಗವದ್ಗೀತೆಯನ್ನು ತಿಳಿಸಿದ್ದಾನೆ. ದೇವರು ತಿಳಿಸಿರುವುದಾದ್ದರಿಂದ ಭಗವದ್ಗೀತೆಯೆಲ್ಲಾ ದೈವ ಧರ್ಮಗಳೆ ಇವೆ.

ಆದರೆ ಅವು ಮನುಷ್ಯನ ತಲೆಯೊಳಗೆ ಬರುವಷ್ಟರಲ್ಲಿ ಅವುಗಳಲ್ಲಿನ ಬೆಲೆಗಳು ಬದಲಾಗಿ, ದೇವರು ಹೇಳಿದಂತಲ್ಲದೆ, ಮತ್ತೊಂದು ವಿಧವಾಗಿ ಬದಲಾಗಿವೆ. ಆದ್ದರಿಂದ ಭಗವದ್ಗೀತೆ ಮನುಷ್ಯರಲ್ಲಿ ಇಲ್ಲಿಯವರೆಗೂ ಏಕಾಭಿಪ್ರಾಯವನ್ನು ಸಂಪಾದಿಸಲಿಲ್ಲ. ದೇವರು ಹೇಳಿರುವುದು ಒಂದೇ ವಿಧವಾದರೆ, ಮನುಷ್ಯರು ಅದನ್ನು ಅನೇಕ ವಿಧಗಳಾಗಿ ಅರ್ಥ ಮಾಡಿಕೊಂಡಿದ್ದಾರೆ. ಇದನ್ನನುಸರಿಸಿ ದೇವರು ಹೇಳಿರುವುದೇ ಧರ್ಮವಾಗಲಿ, ಮನುಷ್ಯ ಹೇಳಿರುವುದು ಧರ್ಮವಲ್ಲ ಎಂದು ಧೈರ್ಯವಾಗಿ ಹೇಳಬಹುದು. ಎಲ್ಲಾದರೂ ಧರ್ಮದ ಮುಂದೆ ಮನುಷ್ಯರ ಹೆಸರು ಇದ್ದರೂ, ಮನು ಧರ್ಮಶಾಸ್ತ್ರ, ಪ್ರವಕ್ತನಾದ ಮೊಷೆ ಧರ್ಮಶಾಸ್ತ್ರ, ಯೆಷಯಾ ಧರ್ಮಶಾಸ್ತ್ರ ಎಂದು ಕೆಲವು ಗ್ರಂಥಗಳಲ್ಲಿ ಹೇಳಿದಂತೆ ಎಲ್ಲಾದರೂ ಮನುಷ್ಯರ ಹೆಸರುಗಳಿಂದ ಧರ್ಮಶಾಸ್ತ್ರ ಇದ್ದರೂ, ವಾಸ್ತವವಾಗಿ ಅದು ಧರ್ಮಶಾಸ್ತ್ರ ಅಲ್ಲ. ದೇವರು ಹೊರತು ಮನುಷ್ಯರು ಯಾರೂ ಧರ್ಮಶಾಸ್ತ್ರವನ್ನು ಹೇಳಲಾರರು. ಮನುಷ್ಯರು ಹೇಳಿರುವುದು ಧರ್ಮಶಾಸ್ತ್ರ ಅಲ್ಲ ಎಂದು ನಾನಂದರೆ ಕೆಲವರು ಆಶ್ಚರ್ಯವಾಗಿ ನನ್ನನ್ನು ನೋಡಿ ಈ ವಿಧವಾಗಿ ಪ್ರಶ್ನಿಸುತ್ತಾರೆ. ಪ್ರಶ್ನೆಗೆ ತಕ್ಕಂತೆ ನಮ್ಮ ಉತ್ತರಗಳಿರುತ್ತವೆ ನೋಡಿರಿ.

**ಪ್ರಶ್ನೆ :– ಬೈಬಲ್ ಗ್ರಂಥದಲ್ಲಿನ ಮೊಷೆ ಧರ್ಮಶಾಸ್ತ್ರವನ್ನು, ಯೆಷಯಾ ಧರ್ಮಶಾಸ್ತ್ರವನ್ನು ಮೊಷೆ ಪ್ರವಕ್ತ, ಯೆಷಯಾ ಪ್ರವಕ್ತ ಬರೆದಿದ್ದಾರೆಂದು ಇದೆ. ಅಂತಹ ಪ್ರವಕ್ತರು ಬರೆದಿರುವವು ಧರ್ಮಶಾಸ್ತ್ರಗಳು ಅಲ್ಲವಾ?**

**ಉತ್ತರ :–** ಮೊಷೆ ಪ್ರವಕ್ತನಾಗಲಿ, ಯೆಷಯಾ ಪ್ರವಕ್ತನಾಗಲಿ ಇಬ್ಬರೂ ಸಾಧಾರಣ ಮನುಷ್ಯರೆ ಆಗಿರುವುದರಿಂದ, ಅವರು ಬರೆದಿರುವವು ಧರ್ಮಶಾಸ್ತ್ರಗಳು ಅಲ್ಲವೆಂದು ಹೇಳಬಹುದು. ದೇವರು ಹೊರತು ಮನುಷ್ಯರು ಯಾರೂ ಧರ್ಮಶಾಸ್ತ್ರವನ್ನು ಹೇಳಲಾರರು.

**ಪ್ರಶ್ನೆ :– ಪ್ರವಕ್ತನಾದ ಏಸು ಹೇಳಿದ ಬೈಬಲ್‌ನ್ನು ನೀವು ಧರ್ಮಶಾಸ್ತ್ರವೆಂದು ಒಂದು ಸಂದರ್ಭದಲ್ಲಿ ಹೇಳಿದ್ದೀರಾ. ಪ್ರವಕ್ತನಾದ ಏಸು ಸಹಾ ಮನುಷ್ಯನೇ**

**ಅಲ್ಲವೆ! ಅಂತಹದರಲ್ಲಿ ಏಸು ಹೇಳಿರುವುದು ಧರ್ಮಶಾಸ್ತ್ರವಾದಾಗ ಪ್ರವಕ್ತರಾದ ಮೊಷೆ, ಯೆಷಯಾ ಹೇಳಿರುವುದು ಧರ್ಮಶಾಸ್ತ್ರ ಏಕೆ ಅಲ್ಲ?**

**ಉತ್ತರ :–** ಏಸು ಪ್ರವಕ್ತನಾದರೂ ಮನುಷ್ಯನಲ್ಲ. ಏಸು ಮನುಷ್ಯನಂತಿರುವ ಭಗವಂತನು. ಸಾಕ್ಷಾತ್ತು ದೇವರ ಅವತಾರವೇ ಏಸು. ಆದ್ದರಿಂದ ಏಸು ಹೇಳಿರುವುದು ಧರ್ಮಶಾಸ್ತ್ರವೆಂದು ಹೇಳಿದ್ದೇವೆ. ಪ್ರವಕ್ತ ಎನ್ನುವಾತನು ಸಾಮಾನ್ಯ ಮನುಷ್ಯನಾದರೂ ಆಗಬಹುದು, ಇಲ್ಲವೆ ಭಗವಂತನಾದರೂ ಆಗಬಹುದು. ಪ್ರವಕ್ತರಾದಷ್ಟು ಮಾತ್ರಕ್ಕೆ ಎಲ್ಲರೂ ಭಗವಂತರೂ ಅಲ್ಲ. ಹಾಗೆ ಎಲ್ಲರೂ ಸಾಮಾನ್ಯ ಮನುಷ್ಯರೂ ಅಲ್ಲ.

**ಪ್ರಶ್ನೆ :– ದೇವರನ್ನು ಕುರಿತು ಬರೆಯಲಾಗಿರುವುದು ಏನಾದರೂ ಧರ್ಮಶಾಸ್ತ್ರವೇ ಆದಾಗ, ಏಸುವನ್ನು ನೀವು ಭಗವಂತನು ಎಂದಾಗ, ಅದೇ ಏಸು ನನ್ನನ್ನು ಕುರಿತು ಮೊಷೆ ಬರೆದಿದ್ದಾನೆ ಎಂದು ಬೈಬಲ್ ಯೊಹಾನು ಸುವಾರ್ತೆ ಐದನೆ ಅಧ್ಯಾಯದಲ್ಲಿ 46ನೇ ವಚನದಲ್ಲಿ ಹೇಳಿದ್ದಾನೆ. ಆತನನ್ನು ಕುರಿತು ಬರೆದಿರುವುದು ಧರ್ಮಶಾಸ್ತ್ರ ಅಲ್ಲ ಎನ್ನುತ್ತೀರಾ?**

**ಉ॥** ಏಸು ದೇವರ ಅವತಾರವಾದ ಭಗವಂತನಾದರೂ, ಆತನನ್ನು ಕುರಿತು ಮೊಷೆ ಬರೆದಿದ್ದರೂ ಅದು ಧರ್ಮಶಾಸ್ತ್ರವಲ್ಲ. ಏಕೆಂದರೆ ಮೊಷೆ ಏಸುವನ್ನು ಕುರಿತು ಬರೆದರೂ, ಅದರಲ್ಲಿ ಧರ್ಮಗಳನ್ನು ಕುರಿತು ಬರೆಯಲಿಲ್ಲ. ಏಸು ಜೀವನ ಚರಿತ್ರೆಯನ್ನು ಕುರಿತು ಬರೆದಿದ್ದಾನೆ. ಆದ್ದರಿಂದ ಅದು ಜ್ಯೋತಿಷ್ಯ ಶಾಸ್ತ್ರವಾಗುತ್ತದಾಗಲಿ, ಧರ್ಮಶಾಸ್ತ್ರ ಅಲ್ಲ. ದೇವರ ಧರ್ಮಗಳು ಇರುವುದೆ ಧರ್ಮಶಾಸ್ತ್ರ ಎಂದು ಅನ್ನಬಹುದು ಅಥವಾ ಬ್ರಹ್ಮವಿದ್ಯಾಶಾಸ್ತ್ರ ಅನ್ನಬಹುದು. ಭೂಮಿಮೇಲೆ ಷಟ್ ಶಾಸ್ತ್ರಗಳೇ ಇವೆ. ಆರುಶಾಸ್ತ್ರಗಳಲ್ಲಿ ದೊಡ್ಡದು ಬ್ರಹ್ಮವಿದ್ಯಾ ಶಾಸ್ತ್ರ ಅಥವಾ ಧರ್ಮಶಾಸ್ತ್ರ ಅನ್ನುತ್ತೇವೆ. ಧರ್ಮಶಾಸ್ತ್ರ ಉಳಿದ ಐದು ಶಾಸ್ತ್ರಗಳಾದ ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯಶಾಸ್ತ್ರಗಳಿಗಿಂತ ದೊಡ್ಡದು. ಮೊಷೆ ಹೇಳಿರುವುದು ಏಸು ಬಗ್ಗೆ ನಡೆಯುವಂತಹ ಸಂಘಟನೆಗಳು, ಆದ್ದರಿಂದ

ಅದನ್ನು ಜ್ಯೋತಿಷ್ಯಶಾಸ್ತ್ರ ಎನ್ನಬಹುದಾಗಲಿ, ಧರ್ಮಶಾಸ್ತ್ರ ಅನ್ನಬಾರದು. ಧರ್ಮಶಾಸ್ತ್ರದಲ್ಲಿ ದೇವರ ವಿಧಾನಗಳು ಇರುತ್ತವೆ. ಧರ್ಮಶಾಸ್ತ್ರವನ್ನು ದೇವರೇ ಹೇಳುತ್ತಾನೆ, ಮನುಷ್ಯರು ಹೇಳುವುದಿಲ್ಲ. ಏಸು ಸಹ "ದೇವರು ಹೇಳಿದ ಧರ್ಮಶಾಸ್ತ್ರದ ಪ್ರಕಾರ ನಾನು ನಡೆಯುವುದಕ್ಕೆ ಬಂದಿದ್ದೇನಾಗಲಿ, ಮನುಷ್ಯರು ಹೇಳಿದಹಾಗೆ ನಡೆಯುವುದಕ್ಕೆ ಬರಲಿಲ್ಲ" ಎನ್ನುವಂತೆ ಮೋಷೆ ಹೇಳಿರುವುದು ಧರ್ಮಶಾಸ್ತ್ರವಲ್ಲ, ಮೊಷೆಗೆ ಅದು ಅನುಗ್ರಹಿಸಲ್ಪಡಲಿಲ್ಲ ಎಂದು ಯೊಹಾನು ಸುವಾರ್ತೆ, ಆರನೆಯ ಅಧ್ಯಾಯದಲ್ಲಿ 32, 33 ವಚನಗಳಲ್ಲಿ ಹೀಗೆ ಇದೆ. "(32) ಪರಲೋಕದಿಂದ ಬರುವ ಆಹಾರವನ್ನು ಮೋಷೆ ನಿಮಗೆಕೊಡಲಿಲ್ಲ. ನನ್ನ ತಂದೆಯೇ ಪರಲೋಕದಿಂದ ಬರುವ ನಿಜವಾದ ಆಹಾರವನ್ನು ನಿಮಗನುಗ್ರಹಿಸುತ್ತಿದ್ದಾನೆ. (33) ಪರಲೋಕದಿಂದ ಇಳಿದುಬಂದು ಲೋಕಕ್ಕೆ ಜೀವಕೊಡುವುದು ದೇವರನುಗ್ರಹಿಸುವ ಆಹಾರವಾಗಿದೆಯೆಂದು ನಿಮಗೆ ನಿಶ್ಚಯವಾಗಿ ಹೇಳುತ್ತಿದ್ದೇನೆ." ಇಲ್ಲಿ ಹೇಳಿದ ಈ ವಾಕ್ಯದಲ್ಲಿ ಕೆಲವು ಪದಗಳು ಅರ್ಥವಾಗದಿರಬಹುದು. ಆದ್ದರಿಂದ ಅವುಗಳ ವಿವರವನ್ನು ಹೇಳಬೇಕೆಂದು ಕೊಂಡಿದ್ದೇನೆ. ಪರಲೋಕದಿಂದ ಇಳಿದುಬರುವ ಆಹಾರ ಎನ್ನುವ ವಾಕ್ಯಕ್ಕೆ ವಿವರವನ್ನು ಹೇಳಿಕೊಂಡರೆ, ಪರಲೋಕದಿಂದ ಅಂದರೆ ದೇವರ ಹತ್ತಿರದಿಂದ ಎಂದು ಅರ್ಥ. ಇಳಿದುಬಂದ ಆಹಾರ ಎಂದರೆ ಜ್ಞಾನರೂಪ ವಾಗಿರುವ ದೇವರ ಧರ್ಮಗಳೆಂದು ತಿಳಿಯಬೇಕು. ದೇವರ ಧರ್ಮಗಳು ಮೋಷೆ ನಿಮಗೆ ಕೊಡಲಿಲ್ಲವೆಂದು ಮೇಲಿನ ವಾಕ್ಯದಲ್ಲಿ ಇದೆ. ಆದ್ದರಿಂದ ಮೋಷೆ ಬರೆದಿರುವುದು ಧರ್ಮಶಾಸ್ತ್ರ ಅಲ್ಲವೆಂದು ಸ್ವತಃವಾಗಿ ಯೇಸು ಹೇಳಿದಂತಾಗಿದೆ. ಮೂವತ್ತು ಮೂರನೆ ವಾಕ್ಯದಲ್ಲಿ ದೇವರನುಗ್ರಹಿಸುವ ಆಹಾರ ಲೋಕಕ್ಕೆ ಜೀವಕೊಡುವು ದಾಗಿದೆಯೆಂದು ಹೇಳಲಾಗಿದೆ. ಇದರ ಅರ್ಥ ದೇವರು ತಿಳಿಸಿದ ಧರ್ಮಗಳು ಲೋಕದಲ್ಲಿನ ಮನುಷ್ಯರಿಗೆ ಮೋಕ್ಷ ಕೊಡುವವಾಗಿವೆ ಯೆಂದು ತಿಳಿಸುತ್ತಿದೆ. ಇಲ್ಲಿ ಲೋಕಕ್ಕೆ ಜೀವ ಕೊಡುವುದು ಅಂದರೆ ಜೀವ ಎನ್ನುವ ಪದಕ್ಕೆ ಶಾಶ್ವತವಾಗಿರು ಅಥವಾ ಶಾಶ್ವತವಾಗಿ ಜೀವಿಸುವ ಮೋಕ್ಷವೆಂದು ತಿಳಿಯಬೇಕು.

ಜೀವಿಸು ಎನ್ನುವ ಪದ ಮೋಕ್ಷವನ್ನು ಕುರಿತು ಬಳಸಿರುವುದೆಂದು ತಿಳಿಯಬೇಕು. ಈ ಎರಡು ವಾಕ್ಯಗಳಲ್ಲಿ ಮೋಕ್ಷವನ್ನು ಕೊಡುವ ಧರ್ಮಗಳನ್ನು ಮೋಷೆ ಹೇಳಲಿಲ್ಲ. ಧರ್ಮಗಳನ್ನು ದೇವರೆ ಹೇಳಿದ್ದಾನೆ. ದೇವರು ಹೇಳಿದ ಧರ್ಮ ಗಳಿಂದ ಮನುಷ್ಯರಿಗೆ ಶಾಶ್ವತವಾದ, ನಾಶರಹಿತವಾದ ಮೋಕ್ಷ ಲಭಿಸುತ್ತದೆ ಎಂದು ಇದೆ.

ಮೇಲಿನ ವಿಷಯ ಮೋಷೆ ಹೇಳಿರುವುದು ಧರ್ಮಶಾಸ್ತ್ರ ಅಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿದೆ. ಆದರೆ ಇಲ್ಲಿಯವರೆಗು ಮೋಷೆ ಹೇಳಿರುವುದು ಧರ್ಮಶಾಸ್ತ್ರವೆಂದು ಕೆಲವರಂದರೂ, ಅಥವಾ ಎಲ್ಲರೂ ಹೇಳಿದರೂ ಅದು ಸತ್ಯವಲ್ಲವೆಂದು, ಮೋಷೆ ಹೇಳಿರುವುದು ಜ್ಯೋತಿಷ್ಯಶಾಸ್ತ್ರವೆಂದು, ಧರ್ಮ ಶಾಸ್ತ್ರವನ್ನು ದೇವರು ಹೊರತು ಯಾರೂ ಹೇಳಲಾರರೆಂದು ತಿಳಿಯುತ್ತಿದೆ.

**ಪ್ರಶ್ನೆ :– ಮೊಷೆ ಪ್ರವಕ್ತನಾದರೂ ಮನುಷ್ಯನಾದ್ದರಿಂದ ಆತನು ಹೇಳಿರುವುದು ಧರ್ಮಶಾಸ್ತ್ರ ಅಲ್ಲವೆಂದು ಹೇಳುತ್ತಿದ್ದೀರಲ್ಲವೆ! ಅಂತಹದರಲ್ಲಿ ಭಗವದ್ಗೀತೆಯನ್ನು, ಬೈಬಲ್‌ನ್ನು ಹೇಳಿರುವುದು ಭಗವಂತನಾದರೂ, ನಂತರ ಬರೆದಿರುವುದು ಮನುಷ್ಯರೇ ಅಲ್ಲವೆ! ಅಂತಹದರಲ್ಲಿ ಮನುಷ್ಯರು ಬರೆದಿರುವುದನ್ನು ದೈವಗ್ರಂಥ ಅನ್ನುತ್ತಿದ್ದೇವೆ ಅಲ್ಲವೆ! ದೈವಗ್ರಂಥ ಎಂದರೆ ಧರ್ಮಶಾಸ್ತ್ರವೆ ಅಲ್ಲವೆ! ಇಲ್ಲಿ ಮನುಷ್ಯರು ಬರೆದಿರುವುದು ಧರ್ಮಶಾಸ್ತ್ರವಾದಾಗ ಅಲ್ಲಿ ಪ್ರವಕ್ತನಾದ ಮೊಷೆ ಬರೆದಿರುವುದು ಧರ್ಮಶಾಸ್ತ್ರವೆಂದು ಕೆಲವರನ್ನುವುದು ತಪ್ಪಾ?**

**ಉತ್ತರ :–** ಈ ಪ್ರಶ್ನೆ ಯೋಹಾನು ಸುವಾರ್ತೆ, ಆರನೆಯ ಅಧ್ಯಾಯದಲ್ಲಿ 32, 33 ವಾಕ್ಯಗಳನ್ನು ಜ್ಞಾಪಕ ಮಾಡದಮೊದಲೆ ಕೇಳಬೇಕಾಗಿದೆ. ಆ ಎರಡು ವಾಕ್ಯಗಳನ್ನು ಹೇಳಿದ ನಂತರ ಮೊಷೆ ನಿಮಗೆ ಧರ್ಮಶಾಸ್ತ್ರವನ್ನು ಹೇಳಲಿಲ್ಲ ಎಂದು ಏಸೇ ಹೇಳಿದ ನಂತರ ಈ ಪ್ರಶ್ನೆ ಕೇಳುವುದರಲ್ಲಿ ಅರ್ಥವಿಲ್ಲ. ರಾಮಾಯಣ ಎಲ್ಲವನ್ನು ಕೇಳಿದ ನಂತರ ಸಹಾ ರಾಮನಿಗೆ ಸೀತೆ ಪತ್ನಿಯಾದರೆ ರಾವಣನಿಗೆ ಏನಾಗುತ್ತಾಳೆ? ಎಂದು ಕೇಳಿದಂತಿದೆ. ಆದರೂ ನಾವು ಹೇಳುವುದು

ಏನೆಂದರೆ! ಇತರರಿಗೆ ಸೀತೆ ಏನಾದರು ಆಗಬಹುದಾಗಲಿ ಪತ್ನಿ ಅಲ್ಲವೆಂದು ರಾಮನಿ ಗೊಬ್ಬನಿಗೆ ಪತ್ನಿಯೆಂದು ಹೇಳಿದಂತೆ ಧರ್ಮಶಾಸ್ತ್ರವನ್ನು ಹೇಳುವವನು ದೇವರು ಒಬ್ಬನೇ ಎಂದು, ಉಳಿದವರು ಹೇಳಿರುವುದು ಯಾವ ಶಾಸ್ತ್ರವಾದರೂ ಆಗಬಹುದು ಆದರೆ, ಧರ್ಮಶಾಸ್ತ್ರ ಅಲ್ಲವೆಂದು ಹೇಳುತ್ತಿದ್ದೇವೆ. ಧರ್ಮಶಾಸ್ತ್ರವನ್ನು ದೇವರು ಹೊರತು ಇತರರು ಯಾರೂ ಹೇಳಲಾರರು. ದೇವರು ಹೇಳಿರುವುದನ್ನೇ ಮನುಷ್ಯ ಬರೆದರೂ, ಅದು ದೇವರು ಹೇಳಿದಂತೇ ಆಗಲಿ ಮನುಷ್ಯರು ಹೇಳಿದಹಾಗೆ ಅಲ್ಲ.

**ಪ್ರಶ್ನೆ :– ದೈವ ಗ್ರಂಥಗಳಾದ ಧರ್ಮಶಾಸ್ತ್ರಗಳು ಸಹಾ ಸ್ವಲ್ಪ ಕಾಲುಷ್ಯಕ್ಕೆ ಗುರಿಯಾಗಿವೆಯೆಂದು ನೀವು ಗತದಲ್ಲಿ ಹೇಳಿದ್ದೀರಲ್ಲವೆ!**

**ಉತ್ತರ :–** ಹೌದು ಗತಕಾಲದಲ್ಲಿಯೇ ಅಲ್ಲ ಈಗಲೂ ಸಹಾ "ಪ್ರಥಮ ದೈವ ಗ್ರಂಥ ಭಗವದ್ಗೀತೆ" ಎಂಬ ಗ್ರಂಥದಲ್ಲಿ ಅದೇ ಮಾತನ್ನು ಬರೆದಿದ್ದೇವೆ.

ಮೊದಲು ದೇವರು ಹೇಳಿದಾಗ ಅದು ಸ್ವಚ್ಛವಾದ ಧರ್ಮಶಾಸ್ತ್ರವಾದರೂ ಮನುಷ್ಯನ ಜೋಕ್ಯದಿಂದ ಧರ್ಮಶಾಸ್ತ್ರದಲ್ಲಿ ಸಹಾ ಸ್ವಲ್ಪ ಕಾಲುಷ್ಯ ಸೇರಿದೆಂದು ಹೇಳಿದ್ದೇವೆ. ಹೇಳುವುದಲ್ಲದೆ ಆ ಕಾಲುಷ್ಯ ಹೇಗಿದೆಯೋ, ಎಲ್ಲಿದೆಯೊ ತೋರಿಸಿ, ಅದನ್ನು ತೆಗೆದುಹಾಕಿ ಕಾಲುಷ್ಯವಿಲ್ಲದ ಪರಮ, ಪವಿತ್ರ, ಪರಿಶುದ್ಧ ಗ್ರಂಥವಾಗಿ ಭಗವದ್ಗೀತೆಯನ್ನು ತೋರಿಸುವುದು ನಡೆದಿದೆ. ಬೈಬಲ್, ಖುರ್‌ಆನ್ ಎಂಬ ಹೆಸರಿನಿಂದಿರುವವು ಸಹ ದೈವ ಗ್ರಂಥಗಳೇ ಎಂದು, ಅವುಗಳಲ್ಲಿನ ಮನುಷ್ಯರ ಕಾಲುಷ್ಯವನ್ನು ಬೆರಳೆತ್ತಿ ತೋರಿಸುತ್ತಾ, ಅವು ಸಹಾ ಪರಿಶುದ್ಧ, ಪವಿತ್ರ ಗ್ರಂಥ ಗಳಾಗಿರುವಂತೆ ಪ್ರಯತ್ನಿಸುತ್ತಿದ್ದೇವೆ.

**ಪ್ರಶ್ನೆ :– ದೇವರು ಹೇಳಿರುವವು ದೈವ ಗ್ರಂಥಗಳು, ಅವುಗಳನ್ನೇ ಧರ್ಮಶಾಸ್ತ್ರ ಅನ್ನುತ್ತೇವೆ. ದೇವರು ಹೇಳಿರುವುದು ದೇವರಿಗೇ ತಿಳಿದಿದೆಯೆಂಬ ಸೂತ್ರದ ಪ್ರಕಾರ ಆ ಗ್ರಂಥಗಳಲ್ಲಿ ಯಾವುದು ಸತ್ಯವೊ, ಯಾವುದು ಅಸತ್ಯವೊ ದೇವರಿಗೆ ಗೊತ್ತು.**

**ಅಂತಹದರಲ್ಲಿ ಇದು ನಾನು ಹೇಳಿದ ಜ್ಞಾನವಲ್ಲ, ಮನುಷ್ಯರು ಹೇಳಿರುವುದು. ಇದು ಧರ್ಮ, ಇದು ಧರ್ಮವಲ್ಲ ಎಂದು ದೇವರು ಹೇಳಿ, ಗ್ರಂಥಗಳಲ್ಲಿ ಬೆರೆತಿರುವ ಕಾಲುಷ್ಯವನ್ನು ತೋರಿಸಬಹುದು. ಆದರೆ ಮನುಷ್ಯರಾದ ನೀವು ಇದು ಧರ್ಮ, ಇದು ಧರ್ಮವಲ್ಲ ಎಂದು ಅವುಗಳಲ್ಲಿನ ಕಾಲುಷ್ಯವನ್ನು ಹೇಗೆ ತೋರಿಸುತ್ತೀರಾ? ನಿಮಗೆ ಹೇಗೆ ತಿಳಿದಿದೆ?**

**ಉತ್ತರ :–** ಒಳ್ಳೆಯ ಪ್ರಶ್ನೆ ಕೇಳಿದ್ದೀರಾ. ಇದೇ ವಿಷಯವನ್ನು ನಾನೇ "ಪ್ರಥಮ ದೈವ ಗ್ರಂಥ ಭಗವದ್ಗೀತೆ" ಎಂಬ ಗ್ರಂಥದಲ್ಲಿ ವಿವರಿಸಿ ಹೇಳಿದ್ದೇನೆ. ಮೊದಲು ಭೂಮಿಮೇಲೆ ದೇವರು ತನ್ನ ಜ್ಞಾನವನ್ನು ಮೂರು ವಿಧಗಳಾಗಿ ಪ್ರವೇಶಿಸುವಂತೆ ಮಾಡಿದ್ದಾನೆ. ಈಗ ಅದರಲ್ಲಿನ ತಪ್ಪುಗಳನ್ನು ಒಂದು ವಿಧವಾಗಿ ಸರಿ ಮಾಡುತ್ತಿದ್ದಾನೆ. ಒಬ್ಬ ಮನುಷ್ಯನಲ್ಲಿನ ಆತ್ಮ ಮನುಷ್ಯನಿಂದ ಧರ್ಮಶಾಸ್ತ್ರದಲ್ಲಿ ಬೆರೆತುಹೋದ ತಪ್ಪುಗಳನ್ನು ತೋರಿಸಿ, ಹೊರಗೆ ಮನುಷ್ಯರೆಲ್ಲರಿಗೂ ತನ್ನ ಶಾಸ್ತ್ರದಲ್ಲಿನ ತಪ್ಪುಗಳನ್ನು ತಾನೇ ಹೊರಗಿಡುವಂತೆ ಮಾಡಿದ್ದಾನೆ. ಆಕಾಶವಾಣಿ ಯಿಂದ, ತೆರೆಹಿಂದಿರುವ ಗ್ರಹದಿಂದ, ಮನುಷ್ಯನಾದ ಭಗವಂತನಿಂದ ಮೂರು ವಿಧಗಳ ತನ್ನ ಧರ್ಮಗಳನ್ನು ಹೇಳಿಸಿದ ದೇವರು, ಮನುಷ್ಯನಲ್ಲಿನ ಆತ್ಮವೇ ಮನುಷ್ಯನಿಂದ ತನ್ನ ಶಾಸ್ತ್ರದಲ್ಲಿನ ಕಲುಷಿತ ತಪ್ಪುಗಳನ್ನು ಹೊರಬೀ ಳುವಂತೆ ಮಾಡುತ್ತದೆಂಬ ಮತ್ತೊಂದು ವಿಧಾನವನ್ನು ದೇವರು ಭೂಮಿಮೇಲೆ ಆವಿರ್ಭ ವಿಸುವಂತೆ ಮಾಡಿ, ಬೆರೆತಿರುವ ತಪ್ಪುಗಳನ್ನು ತೆಗೆದುಹಾಕುವುದು ಸಹಾ ನಡೆಯುತ್ತಿದೆ. ದೇವರು ಮೂರು ವಿಧಗಳ ತನ್ನ ಧರ್ಮಗಳನ್ನು ಶಾಸ್ತ್ರವಾಗಿ ಬೋಧಿಸಿ, ಒಂದು ವಿಧವಾಗಿ ತಪ್ಪುಗಳನ್ನು ಸರಿಮಾಡುವ ಪದ್ಧತಿಯನ್ನು ಸಹಾ ಏರ್ಪಡಿಸಿದ್ದಾನೆ. ಇಲ್ಲಿ ಒಟ್ಟಾರೆ ನಾಲ್ಕು ವಿಧಾನಗಳಲ್ಲಿ ಮೂರು ವಿಧಾನಗಳು ಬೋಧಿಸುವುದು, ಒಂದು ವಿಧಾನ ಬೆರೆತಿರುವ ತಪ್ಪುಗಳನ್ನು ತೆಗೆದುಹಾಕಿ ಶುದ್ಧಿ ಮಾಡುವುದು. ಒಂದು ಮನೆಯನ್ನು ಕಟ್ಟಿದ ನಂತರ ಆ ಮನೆಯನ್ನು ಶುಭ್ರಮಾಡುವ ಜವಾಬ್ದಾರಿ ಸಹಾ ಮನೆ ಯಜಮಾನನದೆ ಎನ್ನುವಂತೆ, ಧರ್ಮಶಾಸ್ತ್ರವೆಂಬ ಮನೆಯನ್ನು ನಿರ್ಮಿಸಿದ ದೇವರು ಆಗಾಗ

ಆ ಮನೆಯಲ್ಲಿ ಬಿದ್ದಿರುವ ಕಸವನ್ನು ತೆಗೆದುಹಾಕಿ ಶುಭ್ರಮಾಡುವ ಜವಾಬ್ಧಾರಿಯನ್ನು ಸಹಾ ಹೊಂದಿದ್ದಾನೆ. ಆದ್ದರಿಂದ ಮೂರು ವಿಧಗಳ ತನ್ನ ಧರ್ಮಗಳನ್ನು ನೆಲೆಗೊಳಿಸಿದವನು, ಒಂದು ವಿಧಾನದ ಪ್ರಕಾರ ಅದರೊಳಗೆ ಸೇರಿದ ಕಾಲುಷ್ಯವನ್ನು ಸಹಾ ತೆಗೆದುಹಾಕುತ್ತಾನೆ. ಮೂರು ವಿಧಗಳಿಗಿಂತ ಬೇರೆಯಾಗಿರುವ ಮತ್ತೊಂದು ವಿಧಾನವನ್ನು ಅನುಸರಿಸಿ ಧರ್ಮಗಳ ಮೇಲಿರುವ ದೂಳನ್ನು ಕೊಡವಿ ಅವುಗಳನ್ನು ಪ್ರಕಾಶಿಸುವಂತೆ ಮಾಡುತ್ತಾನೆಂದು ತಿಳಿಸುತ್ತಿದ್ದೇವೆ. ಆ ವಿಧಾನವನ್ನು ಯಾವುದೊ ಒಬ್ಬ ಮನುಷ್ಯನ ಮೂಲಕ ಮಾಡಬೇಕಾಗಿದೆ. ಆದ್ದರಿಂದ ಈಗ ಹಾಗೆಯೇ ಮಾಡಿದ್ದಾನೆಂದು ಏಕೆ ಅಂದುಕೊಳ್ಳಬಾರದು?

**ಪ್ರಶ್ನೆ :– ನೀವು ಹೇಳಿರುವುದರ ಪ್ರಕಾರ ಮೂರು ವಿಧಾನಗಳಲ್ಲಿ ಕೊನೆಯ ಮೂರನೆ ವಿಧಾನದಲ್ಲಿ ಮನುಷ್ಯನಾದ ಭಗವಂತನು ಧರ್ಮಗಳನ್ನು ತಿಳಿಸಿದ್ದಾನೆ. ಧರ್ಮಗಳಲ್ಲಿನ ಕಲುಷಿತವನ್ನು ತೆಗೆದುಹಾಕಿ ಶುಭ್ರ ಮಾಡುವುದಕ್ಕೆ ಮನುಷ್ಯ ಮಾತ್ರವೇ ಉಪಯೋಗಪಡುತ್ತಾನಾ? ಅಥವಾ ಮನುಷ್ಯನಂತಿರುವ ಭಗವಂತನು ಆ ಕೆಲಸವನ್ನು ಮಾಡುತ್ತಾನಾ?**

**ಉತ್ತರ :–** ಮನುಷ್ಯನಂತಿರುವ ಭಗವಂತನೆಂದು ಅಂದರೆ ಭಗವಂತನು ಎರಡು ವಿಧಗಳಾಗಿ ಕೆಲಸ ಮಾಡಿದಂತಾಗುತ್ತದೆ. ಆಗ ದೇವರು ಹೇಳಿದ ಮಾತಿಗೆ ವಿರುದ್ಧವಾಗಿ ಭಗವಂತನು ಮೂರನೆ ವಿಧಾನವೇ ಅಲ್ಲದೆ, ನಾಲ್ಕನೆ ವಿಧಾನವನ್ನು ಸಹ ಮಾಡಿದಂತಾಗುತ್ತದೆ. ಹಾಗಲ್ಲದೆ ಭಗವಂತನು ಮೂರನೆ ವಿಧಾನದ ಪ್ರಕಾರ ಜ್ಞಾನವನ್ನು ಹೇಳಿದಾಗ, ನಾಲ್ಕನೆ ವಿಧಾನದ ಪ್ರಕಾರ ಮನುಷ್ಯನಲ್ಲಿನ ಆತ್ಮ ಮಾಡುತ್ತಿದೆಂದು ಹೇಳುತ್ತಿದ್ದೇವೆ. ಮೂರನೆ ವಿಧಾನದಲ್ಲಿ ಪರಮಾತ್ಮನೇ ಆತ್ಮನಂತೆ ಕೆಲಸ ಮಾಡುತ್ತಿದೆ. ನಾಲ್ಕನೆ ವಿಧಾನದಲ್ಲಿ ಆತ್ಮವೇ ಪರಮಾತ್ಮನಂತೆ ಕೆಲಸ ಮಾಡುತ್ತಿದೆ. ಆದರೆ ಪರಮಾತ್ಮ ಆತ್ಮ ಎರಡೂ ಶರೀರದೊಳಗೆ ಕಾಣಿಸದೆ ಇರುವವು. ಆದ್ದರಿಂದ ಎಲ್ಲಿ ಪರಮಾತ್ಮ ಆತ್ಮನಂತೆ ಹೇಳುತ್ತಿದೆಯೊ, ಎಲ್ಲಿ ಆತ್ಮ ಪರಮಾತ್ಮನಂತೆ ಹೇಳುತ್ತಿದೆಯೋ, ಯಾರು ಹೇಳುವುದು ಮೂರನೆ

ವಿಧಾನವೊ, ಯಾರು ಹೇಳುವುದು ನಾಲ್ಕನೆ ವಿಧಾನವೊ, ಯಾರು ಭಗವಂತನಾಗಿರುವ ಮನುಷ್ಯನೊ, ಯಾರು ಮನುಷ್ಯನಾಗಿರುವ ಭಗವಂತನೊ ಯಾರಿಗೂ ಅರ್ಥ ಆಗುವುದಿಲ್ಲ.

**ಪ್ರಶ್ನೆ :– ನಾಲ್ಕನೇ ವಿಧಾನವನ್ನು ಹೇಳುವವನು ಮನುಷ್ಯನಾ, ಭಗವಂತನಾ? ಏನು ಅರ್ಥ ಆಗದಂತೆ ಹೇಳಿದ್ದೀರ. ನಿಜವಾಗಿ ಯಾರೊ ಹೇಳಿರಿ?**

**ಉತ್ತರ :–** ಮೊದಲು ಭೂಮಿಮೇಲೆ ಎಲ್ಲಿ ಮೂರನೆ ವಿಧಾನದ ಪ್ರಕಾರ ಜ್ಞಾನಬೋಧನೆ ನೆಡೆಯುತ್ತಿದೆಯೊ. ಎಲ್ಲಿ ನಾಲ್ಕನೆ ವಿಧಾನದ ಪ್ರಕಾರ ಧರ್ಮಗಳು ಪ್ರಕ್ಷಾಳನೆ ಮಾಡಲ್ಪಡುತ್ತಿವೆಯೊ ಹೇಳಿರಿ, ಆಗ ಅಲ್ಲಿ ಹೇಳಿರುವುದು ಯಾರಾಗಿರುವುದು ನೋಡಿ ಹೇಳುತ್ತೇನೆ.

**ಪ್ರಶ್ನೆ :– ಭಗವದ್ಗೀತೆಯಲ್ಲಿ ಧರ್ಮಗಳಿಗೆ ಗ್ಲಾನಿ ಏರ್ಪಟ್ಟಾಗ ನಾನು ಬಂದು ಪುನಃ ಧರ್ಮಗಳಾವುವೊ ತಿಳಿಸುತ್ತೇನೆಂದಿದ್ದಾನೆ. ಆಗ ಹೊಸದಾಗಿ ಧರ್ಮಗಳನ್ನು ತಿಳಿಸುವುದಕ್ಕೆ ಬಂದಂತೆಯಾ ಅಥವಾ ಮೊದಲೆ ಇರುವ ಧರ್ಮಗಳನ್ನು ಶುಭ್ರ ಮಾಡಿ ತೋರಿಸಿದಂತಾ?**

**ಉತ್ತರ :–** ಪ್ರಥಮ ದೈವ ಗ್ರಂಥ ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಒಂಭತ್ತನೆಯ ಶ್ಲೋಕದಲ್ಲಿ "ನಾನು ಎಲ್ಲಿ ಹುಟ್ಟಿದ್ದೇನೊ, ಏನು ಮಾಡುತ್ತಿದ್ದೇನೊ ಅಂತಹ ನನ್ನ ಜನ್ಮವನ್ನಾಗಲಿ, ನನ್ನ ಕೆಲಸವನ್ನಾಗಲಿ ತಿಳಿಯಲ್ಪಟ್ಟ ಮನುಷ್ಯ ಮರಣಿಸಿದ ನಂತರ ಪುನಃ ಜನ್ಮಕ್ಕೆ ಹೋಗುವುದಿಲ್ಲ. ಅಂತಹವನು ನನ್ನೊಳಗೆ ಐಕ್ಯವಾಗಿಹೋತ್ತಾನೆ" ಎಂದು ಹೇಳಿದ್ದಾನೆ.

***ಶ್ಲೋ॥ ಜನ್ಮ ಕರ್ಮ ಚ ಮೇ ದಿವ್ಯಮ್ ಏವಂ ಯಾ ವೇತ್ತಿ ತತ್ತ್ವತ ।***
***ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸಾರ್ಜುನ! ॥***

ಇದೆಲ್ಲವು ಗಮನಿಸಿದರೆ ಮೊದಲ ವಿಧಾನವಾದ ಆಕಾಶವಾಣಿಯನ್ನಾಗಲಿ, ಎರಡನೆ ವಿಧಾನವಾದ ಗ್ರಹವನ್ನಾಗಲಿ ತಿಳಿಯಬಹುದಾಗಲಿ,

ಮೂರು ನಾಲ್ಕು ವಿಧಾನಗಳಲ್ಲಿ ಯಾವುದು ಮೂರನೆಯದೊ, ಯಾವುದು ನಾಲ್ಕನೆಯದೊ ಹೇಳಲಾರೆವು. ಆದ್ದರಿಂದ ದೇವರು ಸಹಾ ಮೂರನೆ ವಿಧಾನದವರೆಗು ಹೇಳಿ ಬಿಟ್ಟಿದ್ದಾನೆ.

**ಪ್ರಶ್ನೆ :– ದೇವರೇ ಹೇಳದಂತೆ ಬಿಟ್ಟುಹಾಕಿದಾಗ ನಾಲ್ಕನೇ ವಿಧಾನವನ್ನು ಕುರಿತು ನೀನು ಹೇಗೆ ಹೇಳುತ್ತಿದ್ದೀಯಾ?**

**ಉತ್ತರ :–** ನಾಲ್ಕನೇ ವಿಧಾನವನ್ನು ಯಾವ ಮನುಷ್ಯ ಕಂಡುಕೊಳ್ಳಲಾರನು, ಹೇಳಲಾರನು ಎಂದು ನಾನು ಮೊದಲೆ ಹೇಳಿದ್ದೇನೆ. ಆದ್ದರಿಂದ ನಾಲ್ಕನೆ ವಿಧಾನವನ್ನು ಕುರಿತು ನನಗು ಸಹಾ ಏನು ತಿಳಿಯದು. ಆದರೆ ನನ್ನಲ್ಲಿನ ಆತ್ಮಕ್ಕೆ ತಿಳಿದಿದೆ, ಆದ್ದರಿಂದ ಪರಮಾತ್ಮನಾದ ದೇವರು ಶರೀರಕ್ಕೆ ಅಧಿಪತಿಯಾಗಿ ರುವ ಆತ್ಮದಿಂದ ಹೇಳಿಸಿದ್ದಾನೆ. ಆತ್ಮ ಹೇಳುತ್ತದಾಗಲಿ, ಜೀವಾತ್ಮನಾದ ನನಗೆ ತಿಳಿಯದೆಂದು ಹೇಳುತ್ತಿದ್ದೇನೆ.

**ಪ್ರಶ್ನೆ :– ನಿನಗೆ ತಿಳಿಯದಂತೆ ನಿನ್ನ ಆತ್ಮಕ್ಕೆ ಹೇಗೆ ತಿಳಿದಿದೆ?**

**ಉತ್ತರ :–** ಮೊದಲೆ ಹೇಳಿದ್ದೇನಲ್ಲವೆ! ನನಗೆ ಪರಮಾತ್ಮನೊಂದಿಗೆ ಸಂಬಂಧವಿಲ್ಲ. ಪರಮಾತ್ಮನೊಂದಿಗೆ ಆತ್ಮಕ್ಕೇ ಸಂಬಂಧವಿರುತ್ತದೆ. ಆದ್ದರಿಂದ ಪರಮಾತ್ಮ ತಿಳಿಸಿದ ವಿಷಯವನ್ನೇ ಆತ್ಮ ನನ್ನ ಶರೀರದಿಂದ ಹೇಳಿಸಿದೆ. ಅಷ್ಟುಮಾತ್ರಕ್ಕೆ ನಾನು ಹೇಳಿದಾಗೆ ಅಲ್ಲವಲ್ಲ!

**ಪ್ರಶ್ನೆ :– ಇದೇನೊ ದೊಡ್ಡ ತಿರಕಾಸಾಗಿ ಇದೆ. ಏನು ಅರ್ಥವಾಗದಂತೆ ಹೇಳುತ್ತಿದ್ದೀಯಾ.**

**ಉತ್ತರ :–** ನನಗೂ ಅರ್ಥವಾಗಲಿಲ್ಲ ಎಂದೇ ನಾನು ಹೇಳುತ್ತಿದ್ದೇನೆ. ಯಾರಿಗೂ ಅರ್ಥ ಆಗಬಾರದೆಂದೇ ದೇವರು ಹಾಗೆ ಹೇಳಿದ್ದಾನೆ.

**ಪ್ರಶ್ನೆ :– ದೇವರು ಯಾರಿಗೂ ಅರ್ಥ ಆಗಬಾರದೆಂದು ಏಕೆ ಅಂದು ಕೊಳ್ಳುತ್ತಿದ್ದಾನೆ?**

**ಉತ್ತರ :–** ಆತನ ಜನ್ಮವಾಗಲಿ, ಆತನ ಕೆಲಸವಾಗಲಿ ಯಾರಿಗಾದರೂ ಅರ್ಥವಾದರೆ ಅವನಿಗೆ ಸುಲಭವಾಗಿ ಮೋಕ್ಷ ಲಭಿಸುತ್ತದೆ. ಎಷ್ಟೋ ಜ್ಞಾನವನ್ನು ತಿಳಿದು ಯೋಗವನ್ನು ಆಚರಿಸಿದರಾಗಲಿ ದೊರಕದ ಮೋಕ್ಷ ಸುಲಭವಾಗಿ ದೊರಕುವುದು ದೇವರಿಗೆ ಇಷ್ಟವಿಲ್ಲ. ಆದ್ದರಿಂದ ತನ್ನನ್ನು ತನ್ನ ಜನ್ಮವನ್ನೂ, ತನ್ನ ಕರ್ಮವನ್ನೂ ಮನುಷ್ಯ ಜ್ಞಾನ, ಯೋಗದ ಮೂಲಕ ತಿಳಿಯಬೇಕೆಂದು ಹಾಗಲ್ಲದೆ ಸುಲಭವಾಗಿ ತಿಳಿಯಬಾರದೆಂದು ಆತನು ಭೂಮಿಮೇಲೆ ಜಾರಿಮಾಡುವ ಮೂರನೆ ವಿಧಾನವನ್ನಾಗಲಿ, ನಾಲ್ಕನೆ ವಿಧಾನವನ್ನಾಗಲಿ ಯಾರಿಗೂ ಅರ್ಥವಾಗದಂತೆ ಮಾಡಿದ್ದಾನೆ.

**ಪ್ರಶ್ನೆ :– ಅಂತಿಮ ದೈವ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ದೇವರು ಮೂರು ವಿಧಗಳಾಗಿ ತನ್ನ ಧರ್ಮಗಳನ್ನು ಜ್ಞಾನ ರೂಪವಾಗಿ ತಿಳಿಸುತ್ತಾನೆ ಎಂದಿದ್ದಾನೆ. ಆದ್ದರಿಂದ ಅದು ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಹೇಳಿರುವುದೆಂದು ತಿಳಿಯುತ್ತಿದೆ. ಆದರೆ ನೀನು ಹೇಳಿದ ನಾಲ್ಕನೆ ವಿಧಾನಕ್ಕೆ ಎಲ್ಲಾದರೂ ಶಾಸ್ತ್ರಬದ್ಧತೆ ಇದೆಯಾ? ದೈವ ಗ್ರಂಥಗಳಲ್ಲಿ ಎಲ್ಲಾದರೂ ನಾಲ್ಕನೆ ವಿಧಾನಕ್ಕೆ ಸಂಬಂಧಿಸಿರುವುದು ಇರುವಂತೆ ದೇವರು ಹೇಳಿದ್ದಾನಾ?**

**ಉತ್ತರ :–** ಏಕೆ ಹೇಳಲಿಲ್ಲ? ಶಾಸ್ತ್ರಬದ್ಧತೆ ಇಲ್ಲದೆ ಆತನ ವಿಧಾನ ಯಾವುದು ಇರುವುದಿಲ್ಲ. ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಏಳನೆಯ ಶ್ಲೋಕವನ್ನು ನೋಡಿರಿ.

***ಶ್ಲೋ॥ ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ! ।***
***ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥***

ಈ ಶ್ಲೋಕದಲ್ಲಿ ಭಾವ ಹೀಗೆ ಇದೆ. "ತಾನು ಮೊದಲೇ ಹೇಳಿರುವ ಧರ್ಮಗಳಿಗೆ ಗ್ಲಾನಿ ಎಂಬ ಕಾಲುಷ್ಯ ಏರ್ಪಟ್ಟಾಗ ನಾನು ಹುಟ್ಟಿಬಂದು (ಮನುಷ್ಯನಾಗಿ ಬಂದು) ಅಧರ್ಮಗಳಾದ ಕಲುಷಿತವನ್ನು ತೆಗೆದುಹಾಕಿ,

ಧರ್ಮಗಳಿಗೆ ಆತಂಕ ಇಲ್ಲದಂತೆ ಪ್ರಕಾಶಿಸುವಂತೆ ಮಾಡುತ್ತಿದ್ದೇನೆ" ಎಂದು ಅಂದಾಗ ಇರುವ ಧರ್ಮಗಳಿಗೆ ಏರ್ಪಟ್ಟಿರುವ ಗ್ಲಾನಿಯನ್ನು ಇಲ್ಲದಂತೆ ಮಾಡುವುದು ಅವುಗಳಲ್ಲಿನ ಕಾಲುಷ್ಯವನ್ನು ತೆಗೆದುಹಾಕಿದಂತೆ ಆಗುತ್ತದೆ ಅಲ್ಲವೆ! ಆದ್ದರಿಂದ ಈ ಶ್ಲೋಕ ನಾಲ್ಕನೇ ವಿಧಾನಕ್ಕೆ ಆಧಾರ ಅಲ್ಲವೆ!

**ಪ್ರಶ್ನೆ :– ಈ ಶ್ಲೋಕ ನಾಲ್ಕನೇ ವಿಧಾನಕ್ಕೆ ಸಂಬಂಧಿಸಿರುವುದಾದರೆ ಮೂರನೆ ವಿಧಾನಕ್ಕೆ ಶಾಸ್ತ್ರಾಧಾರ ಇಲ್ಲದಂತೆ ಹೋಗುತ್ತದೆ ಅಲ್ಲವೆ! ಇಲ್ಲಿಯವರೆಗೂ ದೇವರು ಬಂದು ಭೂಮಿಮೇಲೆ ಜ್ಞಾನವನ್ನು ತಿಳಿಸುತ್ತಾನೆನ್ನುವುದಕ್ಕೆ ಆ ಶ್ಲೋಕ ಆಧಾರ ಅಂದುಕೊಂಡಿದ್ದೆವು. ಈಗ ಮೂರನೇ ವಿಧಾನಕ್ಕೆ ಶಾಸ್ತ್ರಾಧಾರ ಏನು ಇದೆ?**

**ಉತ್ತರ :–** ಇರುವ ಧರ್ಮಗಳಿಗೆ ಕಾಲುಷ್ಯ ಏರ್ಪಟ್ಟರೆ ಗ್ಲಾನಿ ಎನ್ನುವ ಕಾಲುಷ್ಯವನ್ನು ತೆಗೆದುಹಾಕುವುದಕ್ಕೆ ಬರುತ್ತೇನೆಂದು ಆಧಾರವನ್ನು ತೋರಿಸುತ್ತಾ ಜ್ಞಾನಯೋಗದಲ್ಲಿನ ಏಳನೆಯ ಶ್ಲೋಕವನ್ನು ಹೇಳಿದ್ದಾನೆ. ಪೂರ್ತಿ ತಿಳಿಯದಂತೆ ಹೋದ ಧರ್ಮಗಳನ್ನು ಪುನಃ ತಿಳಿಸುವುದಕ್ಕೆ ಧರ್ಮಗಳನ್ನು ಹೊಸದಾಗಿ ಸಂಸ್ಥಾಪನೆ ಮಾಡುವುದಕ್ಕೆ ಮೂರನೇ ವಿಧಾನವಾಗಿ ಬರುತ್ತೇನೆಂದು ಜ್ಞಾನಯೋಗದಲ್ಲಿಯೇ ಎಂಟನೆಯ ಶ್ಲೋಕದಲ್ಲಿ ಹೇಳಿದ್ದಾನೆ ನೋಡಿರಿ.

ದೇಹದಲ್ಲಿ ಗ್ಲಾನಿ ಏರ್ಪಡುವುದು ನಡೆಯುತ್ತಿರುತ್ತದೆ. ಕೆಲಸ ಮಾಡಿದಾಗ ಶರೀರದಲ್ಲಿ ತಯಾರಾದ ಕಾಲುಷ್ಯದಿಂದ ಸ್ವಲ್ಪ ಬಲಹೀನ ಏರ್ಪಡುವುದನ್ನು ಗ್ಲಾನಿ ಎನ್ನುತ್ತೇವೆ. ಶರೀರದಲ್ಲಿರುವ ಬಲವು ಸ್ವಲ್ಪ ಕಡಿಮೆಯಾಗುವುದನ್ನು ಗ್ಲಾನಿ ಎನ್ನುತ್ತೇವೆ. ಶರೀರದಲ್ಲಿನ ಕಾಲುಷ್ಯ ಬೆವರಿನ ರೂಪದಲ್ಲಿ, ಮೂತ್ರ ರೂಪದಲ್ಲಿ, ಶ್ವಾಸರೂಪದಲ್ಲಿ ಹೊರಗೆ ಹೋಗುತ್ತದೆ. ಗ್ಲಾನಿ ಏರ್ಪಟ್ಟು ಬಲಹೀನ ಹೊಂದಿದ ಮನುಷ್ಯ ಸ್ವಲ್ಪ ವಿಶ್ರಾಂತಿಯನ್ನು ಹೊಂದಿದರೆ ಪುನಃ ಶರೀರವು ಬಲವನ್ನು ಕೈಗೂಡಿಸಿಕೊಳ್ಳುತ್ತದೆ. ಇರುವ ಬಲದಲ್ಲಿ ಸ್ವಲ್ಪ ಗ್ಲಾನಿ ಮೂಲಕ ಕಡಿಮೆಯಾದರೂ, ವಿಶ್ರಾಂತಿಯಿಂದ ಪುನಃ ಪೂರ್ತಿ ಬಲ ಕೈಗೂಡುತ್ತದೆ.

ಹಾಗೇ ಇರುವ ಧರ್ಮಗಳು ಹೊರಗೆ ಮನುಷ್ಯರು ಮಾಡಿದ ಕಾಲುಷ್ಯದಿಂದ ಸ್ವಲ್ಪ ಬಲಹೀನವಾಗಿ ಬದಲಾದರೂ, ಸ್ವಲ್ಪ ವಿಶ್ರಾಂತಿಯನ್ನು ಹೊಂದುವುದರಿಂದ, ಎಂದರೆ ಜ್ಞಾನಬೋಧನೆ ಎನ್ನುವ ವಿಶ್ರಾಂತಿಯನ್ನು ಹೊಂದುವುದರಿಂದ, ಬಲಹೀನತೆ ಎನ್ನುವ ಧರ್ಮಗಳ ಗ್ಲಾನಿ ತೊಲಗಿಹೋಗುತ್ತದೆ. ಇರುವ ಬಲ ಸ್ವಲ್ಪ ಕಡಿಮೆಯಾಗುವುದನ್ನು ಗ್ಲಾನಿ ಎನ್ನುವ ಪದದಿಂದ ಹೇಳಿದ್ದಾರೆ. ಪೂರ್ತಿ ಇಲ್ಲದಹಾಗೆ ಹೋಗುವುದಲ್ಲದೆ ಸ್ವಲ್ಪ ಸ್ಥಗಿತವಾದಾಗ ಮಾತ್ರವೇ ಗ್ಲಾನಿ ಎನ್ನುವ ಪದವನ್ನು ಉಪಯೋಗಿಸುವುದು ನಡೆಯುತ್ತಿದೆಂದು ತಿಳಿಯಬೇಕು.

ಸ್ಥಾಪಿಸುವುದು ಎಂದರೆ ಪೂರ್ತಿ ಇಲ್ಲದಿರುವುದನ್ನು ನೆಲೆಗೊಳಿಸುವುದು ಎಂದು ಅರ್ಥ. ಇಲ್ಲದಿರುವುದನ್ನು ನಿರ್ಮಿಸುವುದನ್ನು ಸ್ಥಾಪಿಸುವುದು ಅನ್ನುತ್ತೇವೆ. ಹೊರಗಿನ ಪ್ರಪಂಚದಲ್ಲಿ ರಾಜಕೀಯ ಪಾರ್ಟಿಗಳು ಒಟ್ಟು ಹತ್ತು ಇವೆಯೆಂದು ಕೊಳ್ಳಿ. ಸ್ವಲ್ಪ ಕಾಲಕ್ಕೆ ಇಲ್ಲದ ಹೊಸ ಪಾರ್ಟಿ ಹನ್ನೊಂದನೆಯದು ತಯಾರಾಗಿದೆಯೆಂದುಕೊಳ್ಳೋಣ. ಆಗ ಆ ಪಾರ್ಟಿಯನ್ನು ಇಂತಹ ನಾಯಕನು ಸ್ಥಾಪಿಸಿದ್ದಾನೆ ಎಂದು ಅನ್ನುತ್ತೇವೆ. ಇಲ್ಲಿ ಸ್ಥಾಪಿಸುವುದು ಎಂದು ಅಂದರೆ ಇಲ್ಲದಿರುವುದನ್ನು ಹೊಸದಾಗಿ ನಿರ್ಮಿಸುವುದೆಂದು ಅರ್ಥ. ಎಂಟನೆಯ ಶ್ಲೋಕದಲ್ಲಿ ಧರ್ಮಸಂಸ್ಥಾಪನೆ ಎಂಬ ಪದವನ್ನು ಉಪಯೋಗಿಸಿದ್ದಾರೆ ಆದ್ದರಿಂದ ಇಲ್ಲದ ಧರ್ಮಗಳನ್ನು ಸೃಷ್ಟಿಸುವುದು ಎಂದು ಇಲ್ಲಿ ಅರ್ಥ ಮಾಡಿಕೊಳ್ಳಬೇಕು. ಏಳನೇ ಶ್ಲೋಕದಲ್ಲಿ ಗ್ಲಾನಿ ಎನ್ನುವ ಪದವನ್ನು ಉಪಯೋಗಿಸಿದ್ದಾರೆ, ಆದ್ದರಿಂದ ಇರುವ ಧರ್ಮಗಳು ಬಲಹೀನವಾದಾಗ ಹೇಳಿದ ಪದವಾಗಿ ಗುರುತಿಸಬೇಕು. ಇದನ್ನನುಸರಿಸಿ ಏಳನೆ ಶ್ಲೋಕದಲ್ಲಿ ಧರ್ಮಗಳಿಗೆ ಸ್ವಲ್ಪ ಬಲಹೀನತೆ ಏರ್ಪಟ್ಟಾಗ ಅಧರ್ಮಗಳನ್ನು ಬಲಹೀನತೆಯನ್ನು ದೇವರು ತೆಗೆದುಹಾಕುತ್ತಾನೆ ಎಂದು ತಿಳಿಯುತ್ತಿದೆ. ಎಂಟನೆಯ ಶ್ಲೋಕದಲ್ಲಿ ಧರ್ಮಗಳು ಪೂರ್ತಿ ಇಲ್ಲದಹಾಗೆ ಹೋದಾಗ ಪುನಃ ಅವುಗಳನ್ನು ಹೊಸದಾಗಿ ಬೋಧಿಸಿ ಸ್ಥಾಪಿಸುತ್ತಾನೆಂದು ತಿಳಿಯುತ್ತಿದೆಂದು ಗ್ರಹಿಸಬೇಕು.)

***ಶ್ಲೋ॥ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।***
***ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥***

**ಭಾವಾರ್ಥ :–** "ಕೆಟ್ಟ ಜನರನ್ನು ಇಲ್ಲದಂತೆ ಮಾಡುವುದಕ್ಕೆ, ಒಳ್ಳೆಯ ಜನರನ್ನಾಗಿ ಬದಲಾಯಿಸುವುದಕ್ಕೆ ಯುಗಯುಗದಲ್ಲಿಯೂ ಹುಟ್ಟುತ್ತಿದ್ದೇನೆ. ಹುಟ್ಟಿ ಪೂರ್ತಿಯಾಗಿ ಇಲ್ಲದಂತೆ ಹೋದ ಧರ್ಮಗಳನ್ನು ಪುನಃ ನೆಲೆಗೊಳಿಸಿ, ಕೆಟ್ಟ ಜನರನ್ನು (ಅಜ್ಞಾನಿಗಳನ್ನು) ಜ್ಞಾನಿಗಳಾಗಿ ಬದಲಾಗುವಂತೆ ಮಾಡುತ್ತಿದ್ದೇನೆ" ಎಂದು ಹೇಳಿದ್ದಾನೆ. ಇಲ್ಲಿ ಇದೇ ಅಧ್ಯಾಯದಲ್ಲಿ ಒಂದು, ಎರಡು, ಮೂರು ಶ್ಲೋಕಗಳಲ್ಲಿ ಮೊದಲು ಸೂರ್ಯನಿಗೆ ಹೇಳಿದ ಜ್ಞಾನ ಸೂರ್ಯನ ಮೂಲಕ ಪ್ರಪಂಚವೆಲ್ಲಾ ಹರಡಿ ಎಲ್ಲರಿಗೂ ತಿಳಿದುಹೋಗಿದೆ. ಹಾಗೆ ಎಲ್ಲರಿಗೂ ತಿಳಿದ ಜ್ಞಾನ ಪೂರ್ತಿಯಾಗಿ ಭೂಮಿಮೇಲೆ ಯಾರಿಗೂ ತಿಳಿಯದಂತಾಗಿದೆ. ಹಾಗೆ ತಿಳಿಯದಂತೆ ಹೋಗಿರುವ ರಹಸ್ಯವಾದ ಜ್ಞಾನವನ್ನು ನಿನಗೆ ನಾನು ಹೇಳುತ್ತಿದ್ದೇನೆ ಜಾಗ್ರತೆಯಾಗಿ ಕೇಳು ಎಂದು ಹೇಳುವುದು ನಡೆದಿದೆ. ಹಾಗೆ ಪೂರ್ತಿ ಇಲ್ಲದಂತೆ ಹೋದಾಗ ನಾನು ಹುಟ್ಟಿ ಪುನಃ ನನ್ನ ಧರ್ಮಗಳನ್ನು ತಿಳಿಸುತ್ತೇನೆ ಎಂದು ಎಂಟನೆಯ ಶ್ಲೋಕದಲ್ಲಿ ಹೇಳಿದ್ದಾನೆ. ಏಳನೆ ಶ್ಲೋಕದಲ್ಲಿರುವ ಧರ್ಮಗಳಲ್ಲಿ ಗ್ಲಾನಿ ಎನ್ನುವ ಕಾಲುಷ್ಯ ಏರ್ಪಟ್ಟಾಗ ಅದನ್ನು ತೆಗೆದುಹಾಕುವುದಕ್ಕೆ ಬರುತ್ತೇನೆಂದು ಹೇಳಿದ್ದಾನೆ. ಆದ್ದರಿಂದ ಚೆನ್ನಾಗಿ ಗಮನಿಸಿದರೆ ಏಳನೆಯ ಶ್ಲೋಕ ನಾಲ್ಕನೆ ವಿಧಾನಕ್ಕೆ, ಎಂಟನೆ ಶ್ಲೋಕ ಮೂರನೆ ವಿಧಾನಕ್ಕೆ ಆಧಾರಗಳಾಗಿ ಇವೆಯೆಂದು ಹೇಳಬಹುದು.

**ಪ್ರಶ್ನೆ :– ಭಗವದ್ಗೀತೆಯಲ್ಲಿನ ಏಳನೆಯ ಶ್ಲೋಕ ಕಾಲುಷ್ಯವನ್ನು ತೆಗೆದುಹಾಕುವ ನಾಲ್ಕನೆ ವಿಧಾನವೆಂದಾಗಲಿ, ಎಂಟನೆಯ ಶ್ಲೋಕ ಪೂರ್ತಿ ಇಲ್ಲದಂತೆ ಹೋದ ಧರ್ಮಗಳನ್ನು ತಿಳಿಸುವ ಮೂರನೆಯ ವಿಧಾನವೆಂದಾಗಲಿ, ಇಲ್ಲಿಯವರೆಗು ಭಗವದ್ಗೀತೆಗೆ ವಿವರ ಹೇಳಿದವರು ಯಾರೂ ಹೇಳಲಾರರು. ಭಗವದ್ಗೀತೆಯಲ್ಲಿನ ಚಿಕ್ಕ ಪದಕ್ಕು ಸಹಾ ಅರ್ಥ ಹೇಳಿದ ಸ್ವಾಮೀಜಿಗಳು ಎಷ್ಟೋಜನ ಇದ್ದಾರೆ.**

**ಅವರು ನೀವು ಹೇಳಿದಂತೆ ಏಳನೆಯ ಶ್ಲೋಕದಲ್ಲಿ ಹೀಗಿದೆಯೆಂದು, ಎಂಟನೆಯ ಶ್ಲೋಕ ಈ ವಿಧವಾಗಿ ಇದೆಯೆಂದಾಗಲಿ ಏಕೆ ಹೇಳಲಿಲ್ಲ?**

**ಉತ್ತರ :–** ಏಕೆ ಹೇಳಲಿಲ್ಲವೊ ಅವರನ್ನೇ ಕೇಳಬೇಕಾಗಿರುತ್ತದೆ. ನಾನು ಹೇಳಿದ ವಿಧಾನಗಳು ಸತ್ಯವಾದವೊ ಅಲ್ಲವೊ ನೋಡಿಕೊಳ್ಳಿ. ನಾನು ಹೇಳಿದಂತೆ ನಿಮಗೆ ಕಾಣಿಸಿದರೂ ನನಗೆ ಹೇಳಿದವನು ಆತ್ಮವೇ ಎಂದು, ಆತ್ಮವೇ ನನ್ನ ಮೂಲಕ ಹೇಳಿಸಿದೆಯೆಂದು ಮೊದಲೇ ಹೇಳಿದ್ದೇನೆ. ವಾಸ್ತವವಾಗಿ ಹೇಳಿದರೆ ದೇವರು ಮೂರು ವಿಧಗಳಾಗಿ ತನ್ನ ಧರ್ಮಗಳನ್ನು ತಿಳಿಸುತ್ತಾನೆಂದು ಮೂರನೆಯ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ ಹೇಳಿದ್ದಾನಾಗಲಿ, ಭಗವದ್ಗೀತೆಯಲ್ಲಿ ಹೇಳಲಿಲ್ಲ. ಭಗವದ್ಗೀತೆಯಲ್ಲಿ ಖುರ್‌ಆನ್‌ನಲ್ಲಿ ಹೇಳಿದಾಗೆ ಮೂರು ವಿಧಾನಗಳು ಇವೆ. ಆದರೆ ಗೀತೆಯಲ್ಲಿರುವ ಮೂರು ವಿಧಾನಗಳನ್ನು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಯಾರೂ ಗುರುತಿಸಲಾರದೆಹೋದರೆ ಹೇಳಿಯೂ ಸಹಾ ಪ್ರಯೋಜನೆ ಇರುವುದಿಲ್ಲ. ಆದ್ದರಿಂದ ಯಾವುದೊ ಒಬ್ಬ ಮನುಷ್ಯನಲ್ಲಿನ ಆತ್ಮದ ಮೂಲಕ ಆ ವಿಧಾನಗಳನ್ನು ದೇವರೇ ಹೇಳಿಸಿದ್ದಾನೆ. ಅಂತಹ ಅವಕಾಶ ನನ್ನ ಶರೀರದಲ್ಲಿ ನನ್ನ ಆತ್ಮದಿಂದ ನಡೆದಿದೆ, ಆದ್ದರಿಂದ ಉಳಿದವರಿಗೆ ಯಾರಿಗೂ ತಿಳಿಯದ ಸಮಾಚಾರ ನನಗೆ ತಿಳಿದಿದೆ.

**ಪ್ರಶ್ನೆ :– ಈಗ ಒಂದು ಮುಖ್ಯವಾದ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಈ ಪ್ರಶ್ನೆಗೆ ಉತ್ತರವನ್ನು ನಮಗೆ ಅರ್ಥವಾಗುವಂತೆ ಹೇಳೆನ್ನುತ್ತಿದ್ದೇವೆ. ಕೃಷ್ಣನು ಹೇಳಿದ ಭಗವದ್ಗೀತೆಯಲ್ಲಿನ ಜ್ಞಾನಯೋಗದಲ್ಲಿ ಏಳು, ಎಂಟು ಶ್ಲೋಕಗಳಲ್ಲಿ ಮೂರನೆ ವಿಧಾನವೂ, ನಾಲ್ಕನೆ ವಿಧಾನವೂ ಇದೆಯೆಂದು ನೀವು ಹೇಳಿದ್ದೀರಾ. ಕೃಷ್ಣನು ಭಗವಂತನಾಗಿ ಬಂದ ದಿನ ಮೂರನೆ ವಿಧಾನವಾದ ಇಲ್ಲದ ಧರ್ಮಗಳನ್ನು ತಿಳಿಸಲು ಬಂದಿದ್ದಾನಾ? ಅಥವಾ ನಾಲ್ಕನೆ ವಿಧಾನವಾದ ಇರುವ ಧರ್ಮಗಳಲ್ಲಿನ ಕಾಲುಷ್ಯವನ್ನು ತೆಗೆದುಹಾಕಲು ಬಂದಿದ್ದಾನಾ?**

**ಉತ್ತರ :–** ಭಗವಂತನು ಭೂಮಿಮೇಲಕ್ಕೆ ಬಂದರೂ, ಯಾರೂ ಆತನನ್ನು

ಗುರುತಿಸಲಾರರೆಂದು ಮೊದಲೆ ಹೇಳಿಕೊಂಡಿದ್ದೇವೆ. ಆದ್ದರಿಂದ ಕೃಷ್ಣನು ಭೂಮಿಮೇಲೆ ಇರುವಾಗ ಆತನು ಭಗವಂತನೆಂದು ಒಬ್ಬ ಭೀಷ್ಮನಿಗೆ ಹೊರತು ಯಾರಿಗೂ ತಿಳಿಯಲ್ಪಡಲಿಲ್ಲ. ನಡೆಯುವಂತಹ ನಂತರ ಕಾಲದಲ್ಲಿ ಭಗವಂತನಿಗೆ ಸಾಕ್ಷಿಯಾಗಿ ಇರುವಂತೆ, ಭೀಷ್ಮನಿಗೆ ಭಗವಂತನ ವಿಷಯ ತಿಳಿಯುವಹಾಗೆ ದೇವರೆ ಮಾಡಿದ್ದಾನೆ. ಆದ್ದರಿಂದ ಭೀಷ್ಮನಿಗೆ ತಿಳಿದಿದೆ. ಭೀಷ್ಮನಿಗೆ ಹೊರತು ಯಾರಿಗೂ ಕೃಷ್ಣನು ಭಗವಂತನೆಂಬ ವಿಷಯವೇ ತಿಳಿಯದು. ಕೃಷ್ಣನು ಸಹಾ ನಾನು ಮೂರು, ನಾಲ್ಕು ವಿಧಾನಗಳನ್ನು ತಿಳಿಸಲು ಬರುತ್ತೇನೆನ್ನುವಂತೆ ಎರಡು ಶ್ಲೋಕಗಳನ್ನು ಹೇಳಿದ್ದಾನೆ. ಆದರೂ ಆದಿಯಲ್ಲಿ ಸೂರ್ಯನಿಗೆ ತಿಳಿಸಿದ ಜ್ಞಾನ, ಸೂರ್ಯನ ಮೂಲಕ ಭೂಮಿಮೇಲೆ ಎಲ್ಲರಿಗೂ ತಿಳಿಯಲ್ಪಟ್ಟು, ಕೊನೆಗೆ ಪೂರ್ತಿಯಾಗಿ ಇಲ್ಲದಂತೆ ಹೋದ ಧರ್ಮಗಳನ್ನು ತಿಳಿಸುತ್ತೇನೆಂದು ಅನ್ನುವುದರಿಂದ, ಆತನ ಮೂರನೆ ವಿಧಾನದ ಪ್ರಕಾರ ಹೊಸದಾಗಿ ಧರ್ಮಗಳನ್ನು ತಿಳಿಸಲು ಬಂದಿದ್ದಾನೆಂದು ತಿಳಿಯುತ್ತಿದೆ. ನಾಲ್ಕನೆ ವಿಧಾನವನ್ನು ಕುರಿತು ಇಂತಹ ಕಡೆ ಹೇಳುತ್ತಿದ್ದೇನೆಂದು ಎಲ್ಲಿಯೂ ಹೇಳಲಿಲ್ಲ. ಆದ್ದರಿಂದ ಕೃಷ್ಣನ ಜನ್ಮದಲ್ಲಿ ಮೂರನೆ ವಿಧಾನದ ಪ್ರಕಾರ ತಿಳಿಯದಂತೆ ಹೋದ ಧರ್ಮಗಳನ್ನು ತಿಳಿಸಿದ್ದಾನೆಂದು, ಅರ್ಥವಾಗುತ್ತಿದೆ. ನಾಲ್ಕನೆ ವಿಧಾನಕ್ಕಾಗಿ ಆತನು ಬರಲಿಲ್ಲವೆಂದು ಸಹಾ ತಿಳಿಯುತ್ತಿದೆ.

**ಪ್ರಶ್ನೆ :– ಧರ್ಮಗಳನ್ನು ತಿಳಿಸಲು ಬಂದವನು ಮನುಷ್ಯನಾಗಿದ್ದರೂ, ಆತನನ್ನು ಭಗವಂತನೆಂದು ಅನ್ನುತ್ತಿದ್ದೇವೆ. ಭಗವಂತನಾಗಿ ಬಂದಿರುವ ಕೃಷ್ಣನು ಜ್ಞಾನಯೋಗ ಏಳನೆ ಶ್ಲೋಕದಲ್ಲಿ ಧರ್ಮಗಳಲ್ಲಿ ಸೇರಿದ ಕಾಲುಷ್ಯವನ್ನು ಸಹಾ ತೆಗೆದುಹಾಕುವುದಕ್ಕೆ ಬರುತ್ತೇನೆಂದು ಹೇಳುವುದರಿಂದ, ನಾಲ್ಕನೆಯ ವಿಧಾನವನ್ನು ಸಹಾ ನೇರವೇರಿಸುವುದಕ್ಕೆ ಭಗವಂತನೇ ಬರುವಹಾಗೆ ಆಧಾರ ಲಭಿಸುತ್ತಿದೆ ಅಲ್ಲವೆ! ಇದಕ್ಕೆ ನೀವೇನನ್ನುತ್ತೀರಾ?**

**ಉತ್ತರ :–** ನಾನು ಮುಖ್ಯ ಸೂತ್ರವನ್ನು ಹೇಳುತ್ತಿದ್ದೇನೆ. ಅದರ ಪ್ರಕಾರ ಉತ್ತರವನ್ನು ನೀನೇ ತಿಳಿದುಕೊಳ್ಳಬಹುದು. ಮನುಷ್ಯ ಶರೀರದಲ್ಲಿನ ಪರಮಾತ್ಮ

ಆತ್ಮನಂತೆ ನಟಿಸಿ ಧರ್ಮಗಳನ್ನು ತಿಳಿಸಿದರೆ ಅದು ಮೂರನೆ ವಿಧಾನವಾಗುತ್ತದೆ. ಒಂದುವೇಳೆ ಮನುಷ್ಯ ಶರೀರದಲ್ಲಿ ಆತ್ಮ ಪರಮಾತ್ಮನಂತೆ ನಟಿಸಿ ಜ್ಞಾನವನ್ನು ಹೇಳಿದರೆ ಅದು ನಾಲ್ಕನೆ ವಿಧಾನವಾಗುತ್ತದೆ. ಇನ್ನೊಂದು ಶರೀರದಲ್ಲಿನ ಆತ್ಮ ಯಾವುದೊ, ಪರಮಾತ್ಮ ಯಾವುದೊ ತಿಳಿಯದ ನಮಗೆ ಯಾವಾಗ ದೇವರು ಹೇಳುತ್ತಿದ್ದಾನೊ, ಯಾವಾಗ ಜೀವಾತ್ಮ ಹೇಳುತ್ತಿದ್ದಾನೊ ಅರ್ಥವಾಗುವುದಿಲ್ಲ. ಆದ್ದರಿಂದ ಈ ವಿಷಯದಲ್ಲಿ ಯಾವಕಡೆ ತೀರ್ಮಾನಿಸಿ ಯಾರೂ ಹೇಳಲಾರರು.

**ಪ್ರಶ್ನೆ :– ಬ್ರಹ್ಮವಿದ್ಯಾಶಾಸ್ತ್ರವೆಂದು ಹಿಂದೂಗಳು, ಧರ್ಮಶಾಸ್ತ್ರ ಎಂದು ಕ್ರೈಸ್ತರು, ದೈವ ಗ್ರಂಥವೆಂದು ಮುಸ್ಲಿಮ್‌ರು ಅವರವರ ಗ್ರಂಥಗಳನ್ನು ಅನ್ನುತ್ತಿದ್ದಾರೆ. ಆ ವಿಧವಾಗಿ ಹೇಳುವುದರಿಂದ ಅವುಗಳಲ್ಲಿ ಏನಾದರೂ ವ್ಯತ್ಯಾಸಗಳಿವೆಯಾ?**

**ಉತ್ತರ :–** ಮೂರು ವಿಧಗಳ ಹೆಸರುಗಳಿಂದ ಮೂರು ಮತದವರು ಕರೆಯುವುದು ನಡೆಯುತ್ತಿರುವುದು ವಾಸ್ತವವೆ. ಆದರೆ ಮೂರು ಗ್ರಂಥಗಳ ಹೆಸರುಗಳು ಬೇರೆಯಾಗಿ ಕಾಣಿಸಿದರೂ, ಅವುಗಳಲ್ಲಿನ ಭಾವ ಮಾತ್ರ ಒಂದೇ ಇದೆ. ಮೂರು ಗ್ರಂಥಗಳು ಮೂರು ಪರಿಮಾಣಗಳಾಗಿ ಆಕಾರದಲ್ಲಿ ದೊಡ್ಡದಾಗಿ ಚಿಕ್ಕದಾಗಿ ಇದ್ದರೂ, ಆ ಮೂರು ಗ್ರಂಥಗಳಲ್ಲಿ ಒಂದೇ ದೇವರ ವಿಷಯವನ್ನೇ ಹೇಳಿರುವುದರಿಂದ, ಮೂರು ಗ್ರಂಥಗಳಲ್ಲಿನ ವಿಷಯಗಳು ಮನುಷ್ಯರೆಲ್ಲರಿಗೂ ಅಗತ್ಯವಾದ ಸೂತ್ರಗಳನ್ನೇ ಬೋಧಿಸುವುದರಿಂದ, ಅವುಗಳಲ್ಲಿ ಯಾವ ವ್ಯತ್ಯಾಸ ಇಲ್ಲವೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ಮೂರು ಗ್ರಂಥಗಳು ಸಮಾನವಾದಾಗ ಆ ಗ್ರಂಥಗಳನ್ನು ಅನುಸರಿಸುವವರು ಮೂರು ಮತಗಳಾಗಿ ಸೀಳಿಹೋಗಿ ಬೇರೆ ಬೇರೆ ಆಚರಣೆಗಳನ್ನು ಏಕೆ ಹೊಂದಿದ್ದಾರೆ?**

**ಉತ್ತರ :–** ಮೂರು ಗ್ರಂಥಗಳಿಗು ಗ್ರಂಥಕರ್ತ ಒಬ್ಬನೇ ಎಂದು ತಿಳಿಯದವರು, ಒಂದೇ ದೇವರು ಮೂರು ಗ್ರಂಥಗಳನ್ನು ಮೂರು ಸಮಯಗಳಲ್ಲಿ ಕೊಟ್ಟಿದ್ದಾನೆಂದು ತಿಳಿಯದವರು, ಮೂರು ಗ್ರಂಥಗಳಲ್ಲಿ ಸರ್ವ ಮಾನವರಿಗೂ

ಅನ್ವಯಿಸುವ ಜ್ಞಾನ ವಿಷಯಗಳು ಇವೆಯೆಂದು ಗ್ರಹಿಸದವರು, ಭಾವದಲ್ಲಿ ಮೂರು ಗ್ರಂಥಗಳು ಒಂದೇ ಉದ್ದೇಶವನ್ನು ಹೊಂದಿ, ಒಂದೇ ಜ್ಞಾನವನ್ನು ಬೋಧಿಸುತ್ತಿವೆಯೆಂದು ತಿಳಿಯದವರು ಗ್ರಂಥಗಳ ಹೆಸರುಗಳನ್ನನುಸರಿಸಿ, ಆಕಾರಗಳನ್ನನುಸರಿಸಿ ಸ್ಥೂಲ ದೃಷ್ಠಿ ಇರುವವರಾಗಿ ಮೂರು ಭಾಗಗಳಾಗಿ ಸೀಳಿಹೋಗಿ ಮೂರು ಮತಗಳಾಗಿ ಹೇಳಿಕೊಳ್ಳುತ್ತಾ, ಒಂದೊಂದು ಮತದವರು ಒಂದೊಂದು ಗ್ರಂಥವನ್ನು ಅನುಸರಿಸುತ್ತಿದ್ದಾರೆ. ಆ ವಿಧವಾಗಿ ಒಂದೇ ಜಾತಿ ಮಾನವರು ಮೂರು ವರ್ಗಗಳಾಗಿ ಸೀಳಿಹೋಗುವುದು ಮನುಷ್ಯರಲ್ಲಿನ ತಿಳುವಳಿಕೆ ಇಲ್ಲದಕೆಲಸ ಎಂದೂ, ಮೂರ್ಖತ್ವ ಎಂದೂ, ಅಜ್ಞಾನ ಎಂದೂ ಹೇಳಬಹುದು.

**ಪ್ರಶ್ನೆ :– ಮೂರು ಮತಗಳಲ್ಲಿಯೂ ಅವರವರ ಗ್ರಂಥಗಳಲ್ಲಿ ದೊಡ್ಡದೊಡ್ಡ ಜ್ಞಾನಿಗಳು ಇದ್ದಾರೆ. ಅವರ ಗ್ರಂಥಗಳಲ್ಲಿನ ವಾಕ್ಯಗಳನ್ನು, ಶ್ಲೋಕಗಳನ್ನು ಧಾರಾಳವಾಗಿ ಹೇಳುವ ಜ್ಞಾನಿಗಳು ಇದ್ದಾರೆ, ಕಷ್ಟವಾದರೂ ಇಷ್ಟವಾಗಿ ಅವರ ಮತಾಚರಣೆಗಳನ್ನು ಆಚರಿಸುವವರು ಇದ್ದಾರೆ. ಅವರವರ ದೇವರ ಬಗ್ಗೆ ಎಷ್ಟೋ ಭಕ್ತಿ ಇರುವವರೆಂದು ಹೆಸರುವಾಸಿಯಾದ ಭಕ್ತರು ಇದ್ದಾರೆ. ಅಂತಹ ಎಷ್ಟೊ ದೊಡ್ಡವರು ಮೂರು ಮತಗಳಲ್ಲಿ ಇದ್ದಾರಲ್ಲವೆ! ಅಷ್ಟು ದೊಡ್ಡವರಿಗೂ ಸಹಾ ಮೂರು ಗ್ರಂಥಗಳಲ್ಲಿನ ವಿಷಯಗಳು ಒಂದೇಯೆಂದು ತಿಳಿದಿಲ್ಲವಾ?**

**ಉತ್ತರ :–** ತಿಳಿದಿದ್ದರೆ ಮೂರು ಮತಗಳಾಗಿ, ಮೂರು ಬೇರೆ ಬೇರೆ ಆಚರಣೆಗಳು ಹೊಂದಿರುತ್ತಾರಾ ಎಂದು ನಾನು ಕೇಳುತ್ತಿದ್ದೇನೆ. ಮೇಲ್ನೋಟಕ್ಕೆ ಎಷ್ಟೊ ದೊಡ್ಡವರೆಂದು ಹೆಸರು ಸಂಪಾದಿಸಿಕೊಂಡರೂ, ಆ ಹೆಸರು ಪ್ರಖ್ಯಾತಿಗಳು ಪ್ರಾಪಂಚಿಕವೇ ಆಗಲಿ ದೈವೀಕವಲ್ಲ. ಪ್ರತಿಯೊಬ್ಬನೂ ನನ್ನ ಮತ ನನ್ನ ಮತವೆಂದು ಹೇಳಿಕೊಳ್ಳುತ್ತಿದ್ದಾರೆ ವಿನಹ ಒಬ್ಬನಾದರೂ ಎಲ್ಲರ ಮತ ಒಂದೇಯೆಂದು, ಎಲ್ಲರದು ಒಂದೇ ಜ್ಞಾನವೆಂದು, ಎಲ್ಲರಿಗೂ ಒಬ್ಬನೇ ದೇವರೆಂದು, ಎಲ್ಲರ ಗುರಿ ಒಂದೇ ದೇವರನ್ನು ಸೇರಿಕೊಳ್ಳುವುದೆಂದು ಅಂದುಕೊಳ್ಳುತ್ತಿದ್ದಾನಾ? ಮೂರು ಗ್ರಂಥಗಳಲ್ಲಿ ಹೇಳಿರುವುದು ಒಬ್ಬನೇ ದೇವರೆಂದು, ಮೂರು ಗ್ರಂಥಗಳಲ್ಲಿ ಹೇಳಿರುವುದು ಒಂದೇಯೆಂದು

ತಿಳಿಯದವರು ದೊಡ್ಡ ಜ್ಞಾನಿಗಳು, ದೊಡ್ಡ ಆಚರಣೆ ಇರುವವರೆಂದು ಹೇಳಿಕೊಳ್ಳುವುದು ಶುದ್ಧ ತಪ್ಪು. ಒಂದು ಮತದ ಹೆಸರು ಹೇಳಿಕೊಳ್ಳುತ್ತಾ ಅವನು ಎಷ್ಟು ದೊಡ್ಡ ಜ್ಞಾನಿಯೆಂದು ಅನಿಸಿಕೊಂಡರೂ, ನಮ್ಮ ಲೆಕ್ಕದಲ್ಲಿ ಮತ್ತು ದೇವರ ಲೆಕ್ಕದಲ್ಲಿ ಅವನು ಅಜ್ಞಾನಿಯಾಗಿಯೇ ಪರಿಗಣಿಸಲ್ಪಡುತ್ತಾನೆ. ಒಂದು ಮತದಲ್ಲಿರುವವನು ಅವನು ಅನುಸರಿಸುತ್ತಿರುವ ಗ್ರಂಥದಲ್ಲಿನ ವಾಕ್ಯಗಳನ್ನು ಕಂಠಾಪಾಟ ಮಾಡಿಕೊಂಡು, ನಿರಾತಂಕವಾಗಿ ಏಕಧಾಟಿಯಾಗಿ ಹೇಳಿದರೂ ಅವನಿಗಿರುವುದು ಜ್ಞಾಪಕಶಕ್ತಿಯಾಗಲಿ, ಜ್ಞಾನಶಕ್ತಿ ಅಲ್ಲವೆಂದು ಹೇಳಬಹುದು. ನಿಜವಾದ ದೇವರ ಜ್ಞಾನವನ್ನು ತಿಳಿದವರು ಯಾರಾದರು ತನ್ನದು ಒಂದು ಮತವೆಂದು ಹೇಳಿಕೊಳ್ಳುವುದಿಲ್ಲ. ಮತದ ಹೆಸರಿನಿಂದ ಚಲಾವಣೆ ಆಗುವವರು ದೇವರಿಗೆ ಎಂದಿಗೂ ಹತ್ತಿರ ಆಗಲಾರರು. ನಾನು ಇಂತಹ ಮತಸ್ಥನೆಂದು ಹೇಳಿಕೊಳ್ಳುವುದು ದೇವರ ಉದ್ದೇಶಕ್ಕೆ ವಿರುದ್ಧವಾಗಿ ಹೇಳುವುದಾಗುತ್ತದೆ. ದೇವರು ಎಲ್ಲರೂ ಒಂದೇ ಮಾರ್ಗದೊಳಗೆ ಬಂದು, ಒಂದೇ ದೇವರಾದ ತನ್ನನ್ನೇ ಆಶ್ರಯಿಸಿ, ತನ್ನನ್ನೇ ಆರಾಧಿಸಬೇಕೆಂಬ ಉದ್ದೇಶದಿಂದ ಮೂರು ಗ್ರಂಥಗಳನ್ನು ಮೂರು ಭಾಷೆಗಳಲ್ಲಿ ಕೊಟ್ಟು ಅವುಗಳಲ್ಲಿ ತನ್ನ ಭಾವವನ್ನು ತಿಳಿಸಿದ್ದರೆ, ಆತನ ಭಾವನೆಗೆ ವಿರುದ್ಧವಾಗಿ ಮನುಷ್ಯರು ಮತಗಳ ಹೆಸರಿನಿಂದ ಸೀಳಿಹೋಗುವುದು ತಪ್ಪು ಅಲ್ಲವೆ?

ಮೂರು ಮತಗಳಲ್ಲಿ ಹೊರಗೆ ಕಾಣಿಸುವಹಾಗೆ ಎಷ್ಟೋಜನ ದೊಡ್ಡ ಜ್ಞಾನಿಗಳು, ಬೋಧಕರು, ಸ್ವಾಮಿಜೀಗಳು ಇದ್ದಾರೆ. ಆದರೂ ಅವರಿಗೆ ದೇವರು ಹೇಳಿದ ಅಸಲಾದ ಮತಾತೀತ ಜ್ಞಾನ ತಿಳಿಯದೆಹೋಗುವುದಕ್ಕೆ ಒಂದು ಕಾರಣ ಇದೆ. ಅದನ್ನು ವಿವರಿಸಿ ಹೇಳಿಕೊಂಡರೆ ಈ ವಿಧವಾಗಿದೆ. ಒಬ್ಬ ಮನುಷ್ಯ ಹೊರಗಿನ ಪ್ರಪಂಚದಲ್ಲಿ ಎಷ್ಟು ದೊಡ್ಡವನಾದರೂ ಆಗಿರಬಹುದಾಗಲಿ, ಆತನ ಶರೀರದಲ್ಲಿ ಆತನು (ಜೀವಿಯು) ಗುಣಗಳ ಮಧ್ಯದಲ್ಲಿ ಸಿಲುಕಿಕೊಂಡಿದ್ದಾನೆ. ಗುಣಗಳು ತಮ್ಮ ಮಧ್ಯದಲ್ಲಿ ಸಿಲುಕಿಕೊಂಡ ಜೀವಿಯನ್ನು ತಮ್ಮ ಪ್ರಭಾವಕ್ಕೆ ಒಳಗಾಗುವಂತೆ ಮಾಡುತ್ತಿವೆ. ಒಂದೊಂದು ಗುಣಕ್ಕೆ ಒಂದೊಂದು ಪ್ರಭಾವವಿದೆ.

ಗುಣಚಕ್ರದಲ್ಲಿ ಒಂದು ಭಾಗದಲ್ಲಿರುವ ಹನ್ನೆರಡು ಗುಣಗಳಿಗೆ ಹನ್ನೆರಡು ಪ್ರಭಾವಗಳು ಇವೆ. ಬೇರೆ ಬೇರೆ ಪ್ರಭಾವಗಳಿರುವ ಗುಣಗಳೆಲ್ಲವನ್ನು ಸೇರಿಸಿ ದೇವರು ತನ್ನ ಗ್ರಂಥವಾದ ಭಗವದ್ಗೀತೆಯಲ್ಲಿ "ಮಾಯೆ" ಎಂದು ಹೆಸರು ಇಟ್ಟಿದ್ದಾನೆ. ಎಲ್ಲಾ ಗುಣಗಳ ಪ್ರಭಾವದಲ್ಲಿ ಸಿಲುಕಿಕೊಂಡ ಜೀವಿಯನ್ನು ಮಾಯೆಯಲ್ಲಿ ಸಿಲುಕಿಕೊಂಡವನೆಂದು ಹೇಳಬಹುದು. ಆ ಲೆಕ್ಕ ಪ್ರಕಾರ ಜಗತ್ತಿನಲ್ಲಿ ಮಾಯೆಯಲ್ಲಿ ಸಿಲುಕಿಕೊಳ್ಳದೆ (ಮಾಯೆಯಲ್ಲಿ ಇಲ್ಲದವನು) ಯಾರಾದರೂ ಇದ್ದಾನಾ? ಎಂದರೆ ಇಲ್ಲವೆಂದೇ ಹೇಳಬಹುದು. ಏಕೆಂದರೆ ಶರೀರದಿಂದ ಇರುವ ಪ್ರತಿಯೊಬ್ಬನು (ಪ್ರತಿ ಜೀವಿಯೂ) ಗುಣಚಕ್ರದಲ್ಲಿ ಗುಣಗಳ ಮಧ್ಯದಲ್ಲಿಯೇ ಇದ್ದಾನೆ. ಆದ್ದರಿಂದ ಎಲ್ಲರೂ ಮಾಯೆಯಲ್ಲಿ ಇದ್ದಾರೆಂದೇ ಹೇಳಬಹುದು.

ಹೊರಗಿನ ಪ್ರಪಂಚದಲ್ಲಿ ಒಬ್ಬ ಕ್ರೈಸ್ತವ ಗುರುವಾದರೂ (ಪೋಪ್ ಆದರೂ) ಮುಸ್ಲಿಮ್ ಪಂಡಿತನಾದರೂ, ಹೈಂದವ ಸ್ವಾಮೀಜಿ ಆದರೂ ಒಳಗಿನ ಪ್ರಪಂಚದಲ್ಲಿ ಗುಣಗಳೆನ್ನುವ ಮಾಯೆಯಲ್ಲಿ ಇದ್ದಾನೆಂದು ಹೇಳಬಹುದು. ತಾವು ಮಾಯೆಯನ್ನು ಜಯಿಸಿದವರೆಂದು ಹೇಳಿಕೊಂಡರೂ ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿ "ಗುಣಮಯಿ ಮಮ ಮಾಯಾ ದುರತ್ಯಯಾ" "ಗುಣಗಳಿಂದ ಕೂಡಿಕೊಂಡ ನನ್ನ ಮಾಯೆಯನ್ನು ದಾಟುವುದು ದುಸ್ಸಾಧ್ಯ" ಎಂದು ದೇವರು ಹೇಳಿದ್ದಾನೆ. ಕೆಲವರು ದೊಡ್ಡ ಜ್ಞಾನಿಗಳೆಂದು ಪ್ರಕಟಿಸಿಕೊಳ್ಳುವುದೆ ಅಲ್ಲದೆ ತಾನೇ ದೇವರು ಎನ್ನುವಂತೆ ಪ್ರವರ್ತಿಸುತ್ತಿರುತ್ತಾರೆ. ಯಾರು ಹೇಗಿದ್ದರೂ ಎಷ್ಟು ದೊಡ್ಡದಾಗಿದ್ದರೂ ಶರೀರದೊಳಗಿನ ಎಲ್ಲರ ಸ್ಥಾನವೂ ಒಂದೇ. ಮಾಯೆಯೆಂಬ ಬಾವಿಯಲ್ಲಿ ಮುಳುಗಿ ಹೊರಗೆ ಬರಲಾರದ ಪರಿಸ್ಥಿತಿಯೇ ಎಲ್ಲರದು ಎಂದು ಹೇಳಬಹುದು. ಆದ್ದರಿಂದ ಭಗವದ್ಗೀತೆಯಲ್ಲಿ ದೇವರು ನನ್ನ ಮಾಯೆಯನ್ನು ದಾಟುವುದು ದುಸ್ಸಾಧ್ಯವೆಂದು ಹೇಳಿದ್ದಾನೆ. ಮಾಯೆಯನ್ನು ಕುರಿತು ಅಷ್ಟು ಗಟ್ಟಿಯಾಗಿ ಮಾಯೆಯನ್ನು ಜಯಿಸುವುದು ಸಾಧ್ಯವಲ್ಲವೆಂದು ದೇವರು ಏಕೆ ಹೇಳಿದ್ದಾನೆಂದು ಆಲೋಚಿಸಿದರೆ, ಗುಣಗಳನ್ನು

ಕುರಿತು ಸ್ವಲ್ಪ ವಿವರ ತಿಳಿಯುತ್ತಿದೆ. ದೈವ ನಿರ್ಮಿತಗಳಾದ ಗುಣಗಳು ಎಷ್ಟೋ ಬಲವಾದವೆಂದು ಅವುಗಳಿಂದ ಯಾರೂ ತಪ್ಪಿಸಿಕೊಳ್ಳಲಾರರೆಂದು ತಿಳಿಯುತ್ತಿದೆ. ನಿಜವಾದ ದೇವರೊಂದರ ಧರ್ಮ ತಿಳಿದು ಅಧಿಪತಿಯಾದ ದೇವರನ್ನೆ ಶರಣುಬೇಡಿ, ಆತನನ್ನೇ ಆರಾಧಿಸುವವನು ಹೊರತುಪಡಿಸಿ ಉಳಿದವನು ಯಾರಾದರೂ ಮಾಯೆಯನ್ನು ದಾಟಿ ಬರಲಾರನು.

**ಪ್ರಶ್ನೆ :– ಕೆಲವರು ಇತರೆ ದೇವತೆಗಳನ್ನು ಆರಾಧಿಸದಂತೆ, ಎಲ್ಲರಿಗಿಂತ ದೊಡ್ಡವನು ದೇವರೇ ಎಂದು, ಆತನನ್ನೇ ಪ್ರಾರ್ಥಿಸುತ್ತಿದ್ದೇವೆ ಅನ್ನುತ್ತಿದ್ದಾರೆ ಅಲ್ಲವೆ! ಮೂರು ಮತಗಳಲ್ಲಿ ಇಸ್ಲಾಮ್ ಮತದವರು ನಾವು ಅಲ್ಲಾಹ್‌ನನ್ನು ಹೊರತುಪಡಿಸಿ ಯಾರನ್ನು ಪ್ರಾರ್ಥನೆ ಮಾಡುತ್ತಿಲ್ಲ, ಅಲ್ಲಾಹ್‌ನನ್ನು ಹೊರತು ಯಾರನ್ನು ದೊಡ್ಡದಾಗಿ ತಪಿಸುವುದಿಲ್ಲ ಅನ್ನುತ್ತಿದ್ದಾರೆ. ಅವರೂ ಸಹಾ ಮಾಯೆಯಲ್ಲಿ ಇದ್ದಂತೇನಾ? ಅವರು ಮಾಯೆಯನ್ನು ಜಯಿಸಿ ದೇವರಿಗೆ ಹತ್ತಿರವಾದಂತೆ ಅಲ್ಲವಾ?**

**ಉತ್ತರ :–** ಅಲ್ಲಾಹ್‌ನನ್ನು ಹೊರತುಪಡಿಸಿ ಬೇರೆ ದೇವರೆ ಇಲ್ಲವೆಂದು, ಅಲ್ಲಾಹ್‌ನನ್ನೇ ಪ್ರಾರ್ಥಿಸಬೇಕೆಂದು ಮುಸ್ಲಿಮ್‌ರಲ್ಲಿ ಪ್ರತಿಯೊಬ್ಬರಿಗೂ ತಿಳಿದಿದೆ. ಆದಷ್ಟುಮಾತ್ರಕ್ಕೆ ಅವರು ಸಹ ಮಾಯೆಯಿಂದ ಹೊರಬೀಳಲಿಲ್ಲವೆಂದೇ ಹೇಳಬಹುದು. ದೇವರು ಎಲ್ಲರಿಗಿಂತ ದೊಡ್ಡವನು ದೇವರನ್ನು ಹೊರತು ಇತರರನ್ನು ಆಶ್ರಯಿಸಬಾರದೆಂದು ಹೇಳಿದರೂ, ಅವರಿಗೆ ದೇವರ ಧರ್ಮಗಳು ಯಾವು ತಿಳಿದಿಲ್ಲ. ಆದ್ದರಿಂದ ಎಷ್ಟು ದೊಡ್ಡ ಮುಸ್ಲಿಮ್ ಭಕ್ತನಾದರೂ, ಆತನು ಮತವೆಂಬುದರಲ್ಲಿ ಸಿಲುಕಿಕೊಂಡು ಇದು ನನ್ನ ಮತ ಎನ್ನುತ್ತಿದ್ದಾನೆ. ಎಂದಾದರೆ ಮತ ಎನ್ನುವುದು ಮನುಷ್ಯನಲ್ಲಿ ಇದೆಯೋ, ಆಗ ಆತನು ಮಾಯೆಯಲ್ಲಿ ಇರುವಂತೆ ಭಾವಿಸಬೇಕು. ಮತ ಎನ್ನುವುದು ಯಾವ ಕೋಶದಲ್ಲಿದ್ದರೂ ಆತನು ಗುಣಗಳಲ್ಲಿ ಪೂರ್ತಿ ಸಿಲುಕಿಕೊಂಡು ಹೊರಬೀಳಲಾರ ನೆಂದು ಅರ್ಥವಾಗುತ್ತಿದೆ. ಈ ವಿಧವಾಗಿ ಎಲ್ಲಾ ಮತದವರು ಮತ ಎನ್ನುವ ಪ್ರಾಥಮಿಕ ಅಜ್ಞಾನವನ್ನೇ ಜಯಿಸದಿರುವಾಗ, ಮಾಯೆಯನ್ನು ಜಯಿಸದಂತೆ ಲೆಕ್ಕಿಸಬೇಕು. ಯಾರಿಗಾದರೂ ಇದೇ ಸೂತ್ರ ಅನ್ವಯಿಸುತ್ತದೆಂದು ತಿಳಿಯಬೇಕು.

**ಪ್ರಶ್ನೆ :- ಶರೀರದಲ್ಲಿರುವ ಮಾಯೆ ಶರೀರದೊಳಗಿರುವ ಜೀವಿಯನ್ನು ಎಷ್ಟೊ ಬಲವಾಗಿ ತನ್ನಲ್ಲಿಯೇ ಅಡಗಿಸುತ್ತಿದೆಯೆಂದರೆ, ಮಾಯೆಗೆ ಬಲ ಹೇಗಿದೆ? ಯಾವ ವಿಧವಾಗಿ ಜೀವಿಯ ಮೇಲೆ ಕೆಲಸ ಮಾಡುತ್ತಿದೆ?**

**ಉತ್ತರ :-** ಮಾಯೆ ಎನ್ನುವುದು ಪ್ರತ್ಯಕ್ಷವಾಗಿ ಇರುವುದಲ್ಲ. ಮಾಯೆ ಪರೋಕ್ಷವಾದುದು. ಪ್ರತ್ಯಕ್ಷವಾಗಿರುವವು ಗುಣಗಳೆಂದು ತಿಳಿಯಬೇಕು. ನಿಮಗೆ ಅರ್ಥವಾಗುವುದಕ್ಕೆ ಗುಣಗಳು ಪ್ರತ್ಯಕ್ಷವಾಗಿವೆ ಎನ್ನುತ್ತಿದ್ದೇನೆ. ವಾಸ್ತವವಾಗಿ ಗುಣಗಳು ಯಾರಲ್ಲಿಯೂ ಪ್ರತ್ಯಕ್ಷವಾಗಿಲ್ಲ. ಗುಣಗಳು ಕಣ್ಣಿಗೆ ಕಾಣಿಸುವವಲ್ಲ. ಜ್ಞಾನನೇತ್ರದ ಮೂಲಕ ನೋಡಿ ತಿಳಿದುಕೊಳ್ಳಬಹುದು. ಹನ್ನೆರಡು ಗುಣಗಳನ್ನು ಸೇರಿಸಿ ಅವುಗಳ ಸಾರಾಂಶವನ್ನು ಮಾಯೆ ಎನ್ನುತ್ತಿದ್ದೇವೆ. ಮನುಷ್ಯ ತಲೆಯಲ್ಲಿನ ಗುಣಚಕ್ರದಲ್ಲಿ ಮೂರು ಭಾಗಗಳಾಗಿರುವ ಗುಣಚಕ್ರದಲ್ಲಿ ಪ್ರತಿ ಭಾಗದಲ್ಲಿಯೂ ಹನ್ನೆರಡು ಗುಣಗಳಿರುತ್ತವೆಂದು ಮೊದಲೆ ತಿಳಿದುಕೊಂಡಿದ್ದೇವೆ. ಅದರಲ್ಲಿ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು ಇರುತ್ತವೆ. ಕೆಟ್ಟ ಗುಣಗಳು ಕ್ರಮವಾಗಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎನ್ನುವವಾಗಿದ್ದು, ಒಳ್ಳೆಯ ಗುಣಗಳು ಕ್ರಮವಾಗಿ ದಾನ, ದಯ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಅನ್ನುವವಾಗಿವೆ. ಕ್ರಮವಾಗಿರುವ ಕೆಟ್ಟ ಗುಣಗಳಿಗೆ ಒಳ್ಳೆಯ ಗುಣಗಳು ವಿರುದ್ಧವಾಗಿ ಇದ್ದೂ ಅದೇ ವರಸೆ ಕ್ರಮದಲ್ಲಿ ಒಂದಕ್ಕೊಂದು ಎದುರಾಗಿ ಇವೆ. ಕಾಮಕ್ಕೆ ದಾನ ವಿರುದ್ದವಾಗಿದ್ದರೆ, ಕ್ರೋಧಕ್ಕೆ ದಯ, ಲೋಭಕ್ಕೆ ಔದಾರ್ಯ, ಮೋಹಕ್ಕೆ ವೈರಾಗ್ಯ, ಗರ್ವಕ್ಕೆ ವಿನಯ, ಅಸೂಯಗೆ ಪ್ರೇಮ ವಿರುದ್ದವಾಗಿವೆ. ವಿರುದ್ದವಾಗಿರುವಂತೆ ಕೆಟ್ಟ ಗುಣ ಪ್ರಭಾವಗಳಿಗೆ ವಿರುದ್ಧವಾಗಿ ಒಳ್ಳೆಯ ಗುಣ ಪ್ರಭಾವಗಳಿವೆ. ಕೆಟ್ಟ ಒಳ್ಳೆಯ ಗುಣಗಳೆಂದು ಅವುಗಳನ್ನು ವಿಭಜಿಸಿ ಹೇಳುವುದಕ್ಕೆ ಅವುಗಳಿಂದ ಬರುವ ಫಲಿತಗಳು ಒಳ್ಳೆಯ ಕೆಟ್ಟದಾಗಿ, ಪುಣ್ಯ ಪಾಪಗಳಾಗಿ ಇರುವುದರಿಂದ ಹಾಗೆ ಹೇಳಬೇಕಾಗಿ ಬಂದಿದೆ.

ಹನ್ನೆರಡು ಗುಣಗಳಿಗೆ ಬೇರೆ ಬೇರೆ ಪ್ರಭಾವಗಳಿವೆಯೆಂದು ಹೇಳಿದ್ದೇವೆ ಅಲ್ಲವೆ! ಆ ಪದ್ಧತಿ ಪ್ರಕಾರ ಕೆಟ್ಟ ಗುಣಗಳಲ್ಲಿ ಮೊದಲನೆಯದಾದ ಆಸೆ

(ಕಾಮ) ಎನ್ನುವ ಗುಣಕ್ಕೆ ಒಂದು ಪ್ರತ್ಯೇಕ ಪ್ರಭಾವವಿರುತ್ತದೆ. ಅದಕ್ಕೆ ವಿರುದ್ಧವಾಗಿ ವಿರುದ್ದವಾಗಿರುವ ದಾನ ಎನ್ನುವ ಗುಣಕ್ಕು ಸಹಾ ಪ್ರತ್ಯೇಕ ಪ್ರಭಾವವಿರುತ್ತದೆ. ಈ ವಿಧವಾಗಿ ಒಂದೊಂದು ಗುಣಕ್ಕು ಒಂದೊಂದು ಪ್ರಭಾವಿದೆಯೆಂದು ತಿಳಿದುಹೋಗಿದೆ. ಗುಣವು ಸ್ಥೂಲವಾದುದು ಅಲ್ಲ, ಸೂಕ್ಷ್ಮವಾದುದು ಇದನ್ನನುಸರಿಸಿ ಗುಣಗಳು ಕಾಣಿಸದ ಹಾಗೆ ಇವೆಯೆಂದು ಹೇಳಬಹುದು. ಸೂಕ್ಷ್ಮವಾಗಿ ಕಣ್ಣಿಗೆ ಕಾಣಿಸದಂತಿದ್ದರೂ ಜ್ಞಾನದೃಷ್ಠಿಗೆ ತಿಳಿಯುವಂತೆ ಇವೆ. ಸೂಕ್ಷ್ಮವಾಗಿಯಾದರೂ ಇರುವುದರಿಂದ ಅವುಗಳಿಗೆ ದೇವರು ಒಂದು ಪರಿಮಿತವಾದ ಆಕಾರವನ್ನು, ಪರಿಮಿತವಾದ ಪ್ರಭಾವವನ್ನು ಕಲ್ಪಿಸಿದ್ದಾನೆ. ಜ್ಞಾನದೃಷ್ಠಿಗೆ ಗುಣಗಳ ಆಕಾರಗಳು ತಿಳಿಯುತ್ತವೆ, ಹಾಗೆ ಅವುಗಳ ಪ್ರಭಾವಗಳು ತಿಳಿಯುತ್ತವೆ. ಒಂದು ಗುಣ ಗುಣಚಕ್ರಭಾಗದಲ್ಲಿ ಒಂದುಕಡೆ ಇದ್ದರೂ ಅದಕ್ಕಿರುವ ಪ್ರಭಾವ ಗುಣಚಕ್ರ ಭಾಗವೆಲ್ಲವೂ ವ್ಯಾಪಿಸಿರುತ್ತದೆ. ಹನ್ನೆರಡು ಗುಣಗಳಿಗು ಬೇರೆ ಬೇರೆಯಾಗಿ ಹನ್ನೆರಡು ಪ್ರಭಾವಗಳು ಗುಣಚಕ್ರ ಭಾಗವೆಲ್ಲಾ ತುಂಬಿರುತ್ತದೆ. ಒಂದೇ ತಂತಿಯಲ್ಲಿ ನೂರು ಟೆಲಿಪೋನ್ ನಂಬರ್‌ಗಳು ಪ್ರಯಾಣಿಸುತ್ತಿದ್ದರೂ, ಅವುಗಳ ಕೋಡ್ ಬೇರೆಯಾಗಿರುವುದರಿಂದ ಒಂದರಜೊತೆ ಒಂದು ಸೇರದಹಾಗೆ ಬೇರೆ ಬೇರೆ ಪ್ರಯಾಣಿಸುವಂತೆ ಒಂದೇ ಗುಣಭಾಗದಲ್ಲಿ ಹನ್ನೆರಡು ಗುಣ ಪ್ರಭಾವಗಳಿದ್ದರೂ ಅವು ಒಂದರಜೊತೆ ಒಂದು ತಿಳಿಯದಂತೆ ಬೇರೆ ಬೇರೆ ಪ್ರಭಾವಗಳು ಹೊಂದಿವೆ.

ಭಾವ ಎಂದರೆ ಭಾಷೆಯಲ್ಲಿರುವ ಅರ್ಥ. ಭಾಷೆ ಕಾಣಿಸಿದರೂ, ಕೇಳಿಸಿದರೂ ಭಾವ ಕಾಣಿಸುವುದಿಲ್ಲ ಕೇಳಿಸುವುದಿಲ್ಲ. ಭಾವ ಮನುಷ್ಯನಲ್ಲಿನ ಬುದ್ಧಿಯನ್ನು ಬದಲಾಯಿಸಬಲ್ಲದು. ತೆಲುಗು ಭಾಷೆಯಲ್ಲಿನ ಒಂದು ಪದವನ್ನು ಒಂದು ಸಂದರ್ಭದಲ್ಲಿ ಬಳಸಿದಾಗ ಅದರ ಭಾವ ನಮ್ಮಲ್ಲಿ ಹೇಗೆ ಕೆಲಸಮಾಡುತ್ತಿದೆಯೊ ಉದಾಹರಣೆಗೆ ಗಮನಿಸೋಣ.

ಒಂದುಕಡೆ ಮೂವರು ವ್ಯಕ್ತಿಗಳಿದ್ದಾರೆಂದುಕೊಳ್ಳೋಣ. ಮೂವರು ವ್ಯಕ್ತಿಗಳಲ್ಲಿ ಒಬ್ಬರ ಹತ್ತಿರ ಜೇನು ಇದೆ. ಒಂದನೆಯವನು ತನ್ನ ಹತ್ತಿರವಿರುವ

ಜೇನನ್ನು ಎರಡನೆಯವನ ಕೈಯೊಳಗೆ ಹಾಕಿದ್ದಾನೆ. ಪಕ್ಕದಲ್ಲಿಯೇ ಇರುವ ಮೂರನೆಯವನು ಜೇನನ್ನು ನೋಡಿ ನನಗೆ (ನಾಕು) ಎಂದಿದ್ದಾನೆ. (ನಾಕು ಎಂದರೆ ನೆಕ್ಕು ಎಂದು ಮತ್ತೆ ನನಗೆ ಎಂದು ಎರಡು ಅರ್ಥ ಬರುತ್ತದೆ) ನಾಕು ಎನ್ನುತ್ತಲೇ ಎರಡನೆಯವನು ಕೈಯಲ್ಲಿನ ಜೇನನ್ನು ನಾಲಿಗೆಯಿಂದ ನೆಕ್ಕಿದ್ದಾನೆ. ಮೂರನೆಯವನು ಮತ್ತೊಂದು ಬಾರಿ ನನಗೆ (ನಾಕು) ಎಂದನು. ಆಗ ಎರಡನೆಯವನು ನೆಕ್ಕಿದ್ದೇನೆ ಮುಗಿದುಹೋಗಿದೆ ಎಂದನು. ಮೊದಲೆಯವನು ಮೂರನೆಯವನು ಜೇನು ಬೇಕೆಂದು ಕೇಳುತ್ತಿದ್ದಾನೆಂದು ಗ್ರಹಿಸಿ, ತನ್ನ ಹತ್ತಿರವಿರುವ ಜೇನನ್ನು ಮೂರನೆಯವನಿಗು ಸಹ ಸ್ವಲ್ಪ ಕೊಟ್ಟಿದ್ದಾನೆ. ಇಲ್ಲಿ ನಾಕು(ನೆಕ್ಕು ಎಂದು ಮತ್ತೆ ನನಗೆ ಎಂದು) ಎನ್ನುವ ಶಬ್ದವೊಂದರ ಭಾವನೆ ಎರಡನೆಯವನಿಗೆ ಒಂದು ವಿಧವಾಗಿ ಅರ್ಥವಾಗಿ, ಮೊದಲನೆಯವನಿಗೆ ಮತ್ತೊಂದು ವಿಧವಾಗಿ ಅರ್ಥವಾಗಿದೆ. ಮೂರನೆಯವನು ಎರಡನೆಬಾರಿ ಕೇಳುವವರೆಗು ಮೊದಲನೆಯವನಿಗು ಸಹ ಸರಿಯಾದ ಭಾವ ಅರ್ಥವಾಗಲಿಲ್ಲ. ಎರಡನೆಯವನಿಗೆ ಜೇನನ್ನು ನಾಲಿಗೆಯಿಂದ ರುಚಿ ನೋಡೆನ್ನುವಂತೆ ಅರ್ಥವಾಗಿದೆ. ಮೂರನೆಯವನ ಉದ್ದೇಶದಲ್ಲಿ ತನಗು ಸಹ ಬೇಕೆಂಬ ಅರ್ಥದಿಂದ ನನಗೆ ಎಂದಿದ್ದಾನೆ. ಈ ವಿಧದಲ್ಲಿ ಒಂದೇ ಪದದಲ್ಲಿ ಎರಡು ಭಾವಗಳು ಹುಟ್ಟಿದಂತೆ ಅರ್ಥವಾಗಿದೆ ಅಲ್ಲವೆ! ಈ ವಿಧವಾಗಿ ಒಂದೇ ಪದಕ್ಕೆ ನಾಲ್ಕೈದು ಭಾವಗಳು ಸಹಾ ಇರುತ್ತವೆ. ಆದರೆ ಸಮಯ ಸಂದರ್ಭವನ್ನನುಸರಿಸಿ ಅವುಗಳಲ್ಲಿ ಸರಿಯಾದ ಅರ್ಥವನ್ನು ಗ್ರಹಿಸಬೇಕಾಗಿರುತ್ತದೆ. ಇಲ್ಲಿ ಒಂದು ಪದದಲ್ಲಿ ಭಾವ ಹೇಗಿರುವುದು ಅರ್ಥವಾಗಿದೆ ಅಲ್ಲವೆ! ಭಾಷೆ ಬರಹದಲ್ಲಿ ಕಾಣಿಸಿದರೂ, ಶಬ್ಧದಲ್ಲಿ ಕೇಳಿಸಿದರೂ ಅದರಲ್ಲಿನ ಭಾವ ಮಾತ್ರ ಬಾಹ್ಯ ಜ್ಞಾನೇಂದ್ರಿಗಳಿಗೆ ತಿಳಿಯದು. ಶರೀರದಲ್ಲಿರುವ ಅಂತಃಕರಣಗಳಲ್ಲಿ ಒಂದಾದ ಬುದ್ಧಿಗೆ ಮಾತ್ರ ತಿಳಿಯುತ್ತದೆ. ಒಂದು ಭಾಷೆಯಲ್ಲಿನ ಶಬ್ಧಕ್ಕೆ ನಾಲ್ಕೈದು ಅರ್ಥಗಳಿರುವಾಗ ಅದರಲ್ಲಿ ಯಾವುದೋ ಒಂದನ್ನು ಮಾತ್ರ ಬುದ್ಧಿ ಗ್ರಹಿಸುತ್ತದೆ. ಮೂವರು ವ್ಯಕ್ತಿಗಳು ಜೇನಿನ ಬಗ್ಗೆ ನಾಕು (ನೆಕ್ಕು ಅಥವಾ ನನಗೆ) ಅನ್ನುವ ಶಬ್ಧಕ್ಕೆ ಮೂರು ವಿಧಗಳ ಅರ್ಥ ಮಾಡಿಕೊಂಡಂತೆ, ಇರುವ ಅರ್ಥಗಳಲ್ಲಿ

ಯಾವುದೊ ಒಂದು ಅರ್ಥವನ್ನು ಮಾತ್ರವೆ ಬುದ್ಧಿ ಗ್ರಹಿಸಿ ಜೀವಿಗೆ ತಿಳಿಸುತ್ತದೆ. ಒಂದು ಪದಕ್ಕೆ ಅರ್ಥಗಳು ಬೇರೆ ಬೇರೆಯಾಗಿ ನಾಲ್ಕೈದು ಇದ್ದರೂ ಅಥವಾ ಎರಡು ಮೂರು ಇದ್ದರೂ, ಅದರಲ್ಲಿಂದ ಬುದ್ಧಿಒಂದನ್ನು ಮಾತ್ರವೆ ಗ್ರಹಿಸುತ್ತದೆ ಜೇನಿನ ವಿಷಯದಲ್ಲಿ ನಾಕು (ನನಗೆ) ಎಂದು ಮೂರನೆಯವನು ತನ್ನ ಭಾವನೆಯಿಂದ ಕೇಳಿದರೆ, ಎರಡನೆಯವನ ಬುದ್ಧಿ ಜೇನನ್ನು ನೆಕ್ಕೆಂದು ಹೇಳಿದಹಾಗೆ ಗ್ರಹಿಸಿದೆ. ಇದನ್ನನುಸರಿಸಿ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಅರ್ಥವಾದಂತೆ ತಿಳಿದಿದೆ.

ಈ ವಿಧವಾಗಿ ಬುದ್ಧಿ ಒಂದು ಭಾವವನ್ನು ಮಾತ್ರವೇ ಗ್ರಹಿಸುತ್ತದೆ. ಬುದ್ಧಿ ಗ್ರಹಿಸಿದ ಭಾವದಲ್ಲಿಯೇ ಜೀವಿಯಿದ್ದು ಹೋಗುತ್ತಾನೆ. ಆದ್ದರಿಂದ ದೇವರ ಜ್ಞಾನ ಸಹಾ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಅರ್ಥವಾಗುವುದರಿಂದ ಮನುಷ್ಯರು ಒಂದೇ ದೇವರ ಮೇಲೆ ಸಹಾ ಬೇರೆ ಬೇರೆ ಭಾವಗಳು ಹೊಂದಿದ್ದಾರೆ. ದೇವರು ಅಣುಅಣುವಿನಲ್ಲಿ ಇದ್ದಾನೆಂದು ಒಬ್ಬನಂದರೆ, ದೇವರು ಎಲ್ಲಾಕಡೆ ಇಲ್ಲ, ಆತನು ಏಳನೆಯ ಆಕಾಶದಲ್ಲಿ ಇದ್ದಾನೆಂದು ಮತ್ತೊಬ್ಬನು ಅನ್ನುತ್ತಿದ್ದಾನೆ. ಅವನ ಬುದ್ಧಿಗೆ ಹಾಗೆ ಅರ್ಥವಾಗಿದೆ. ಆದ್ದರಿಂದ ಅವನು ಅದೇ ಸತ್ಯವೆಂದು ಅನ್ನುತ್ತಿದ್ದಾನೆ. ಬುದ್ಧಿ ಗ್ರಹಿಸುವುದು ಒಂದು ಭಾವವನ್ನೇ ಆದರೂ ಆ ಭಾವವು ಕಾಣಿಸುವುದು ಅಲ್ಲ. ಬುದ್ಧಿ ಗ್ರಹಿಸುವ ಭಾವನೆ ತನ್ನ ಪ್ರಭಾವಕ್ಕೆ ಮನುಷ್ಯನನ್ನು ಒಳಗಾಗುವಂತೆ ಮಾಡುತ್ತಿದೆ. ನೀನು ಮನುಷ್ಯನೇ ಅಲ್ಲ ದೇವರು ಎಂದು ಮತ್ತೊಬ್ಬನನ್ನು ಕುರಿತು ಅಂದರೆ, ಅವನು ಅದರಲ್ಲಿನ ಭಾವವನ್ನು ಗ್ರಹಿಸಿ ಆ ಭಾವನೆಯಲ್ಲಿ ಹುಟ್ಟಿದ ಪ್ರಭಾವಕ್ಕೆ ಒಳಗಾಗಿಹೋಗಿ, ತನ್ನನ್ನು ಹೊಗಳಿದಂತೆ ಸಂತೋಷಿಸುತ್ತಾನೆ.

ಮನುಷ್ಯನ ಬುದ್ಧಿ ಭಾಷೆಯಲ್ಲಿನ ಭಾವವನ್ನು ಗ್ರಹಿಸಿದಾಗ ಆ ಭಾವದಿಂದ ಹುಟ್ಟಿರುವುದು ಪ್ರಭಾವ. ನೀನು ಮನುಷ್ಯನು ಅಲ್ಲ ದೇವರು ಎಂದಾಗ ಕೇಳಿದವನು ಗ್ರಹಿಸಿದ ಭಾವವನ್ನನುಸರಿಸಿ ಜೀವಿಯು ಪ್ರಭಾವಕ್ಕೆ ಒಳಗಾಗಿ ತನ್ನನ್ನು ದೊಡ್ಡದಾಗಿ ಅನ್ನುತ್ತಿದ್ದಾನೆಂದು ಸಂತೋಷಿಸುತ್ತಾನೆ.

ಮತ್ತೊಂದು ಸಂದರ್ಭದಲ್ಲಿ ನೀನು ಮನುಷ್ಯನೇ ಅಲ್ಲ ಎಂದು ಕೇಳಿಸಿ, ದೇವರು ಎನ್ನುವ ಮಾತು ಕೇಳಿಸಲಿಲ್ಲ ಎಂದುಕೊಳ್ಳಿ. ಆಗ ಆತನ ಬುದ್ಧಿ ಗ್ರಹಿಸಿದನ್ನನುಸರಿಸಿ ತನ್ನನ್ನು ದೂಷಿಸುತ್ತಾ ನೀನು ಪ್ರಾಣಿ ಎನ್ನುವಂತೆ ಅರ್ಥವಾಗಿದೆ. ಅದರ ಪ್ರಭಾವದಿಂದ ಆ ಮನುಷ್ಯ ಬದಲಾಗಿಹೋಗಿ, ನೀನು ಮನುಷ್ಯನಲ್ಲ ಅಂದವನ ಮೇಲೆ ದ್ವೇಷವನ್ನು ಬೆಳೆಸಿಕೊಂಡಿದ್ದಾನೆ. ಒಂದೇ ಭಾಷೆ ಒಂದೇ ಅರ್ಥವನ್ನು ಕೊಟ್ಟರೂ ಕೇಳಿಸುವುದರಲ್ಲಿ ವ್ಯತ್ಯಾಸ ಬಂದಿರುವುದರಿಂದ ಭಾವದಲ್ಲಿ ಹುಟ್ಟಿದ ಪ್ರಭಾವಗಳಿಂದ ಮನುಷ್ಯ ಬದಲಾಗಿಹೋಗುವುದು ನಡೆಯುತ್ತಿದೆ. ಕುರುಕ್ಷೇತ್ರ ಯುದ್ಧದಲ್ಲಿ ಧರ್ಮರಾಜು "ಅಶ್ವತ್ಥಾಮ ಹತಃ ಕುಂಜರಃ ಎಂದು ಎಂದಿದ್ದಾನಂತೆ. ಅದರಲ್ಲಿ ಕೊನೆಯ ಪದವಾದ ಕುಂಜ ರಃ ಎನ್ನುವ ಪದವನ್ನು ನಿಧಾನವಾಗಿ ಕಡಿಮೆ ಶಬ್ಧದಲ್ಲಿ ಅನ್ನುವುದರಿಂದ, ಆ ಕೊನೆಯ ಮಾತು ಕೇಳಿಸದಿರುವುದರಿಂದ "ಅಶ್ವತ್ಥಾಮ ಹತಃ ಎನ್ನುವ ಮಾತನ್ನು ಕೇಳಿದ ದ್ರೋಣನು ಅಶ್ವತ್ಥಾಮ ಎನ್ನುವ ತನ್ನ ಕುಮಾರನು ಮರಣಿಸಿದ್ದಾನೆಂದು ಗ್ರಹಿಸಿ, ಅದರ ಪ್ರಭಾವದಿಂದ ಚೇಷ್ಟೆಗಳಿಲ್ಲದ ನಿಶ್ಚೇಷ್ಟನಾಗಿ ನಿಂತುಹೋಗಿದ್ದಾನೆ. ಯುದ್ಧರಂಗದಲ್ಲಿ ಯುದ್ಧ ಮಾಡದೆ ನಿಂತುಹೋದ ದ್ರೋಣನನ್ನು ಶತ್ರುಗಳು ಸುಲಭವಾಗಿ ಸಾಯಿಸಿದ್ದಾರೆ. ಅಲ್ಲಿ ಹೇಳಿರುವುದು "ಅಶ್ವತ್ಥಾಮ ಎನ್ನುವ ಆನೆ ಸತ್ತುಹೋಗಿದೆ" ಎಂಬ ಮಾತಾದರೆ ದ್ರೋಣನಿಗೆ ಕುಂಜರಃ ಎನ್ನುವ ಮಾತು ಕೇಳಿಸದಿರುವುದರಿಂದ ಅಶ್ವತ್ಥಾಮ ಎನ್ನುವ ಆನೆ ಎಂದು ಅರ್ಥವಾಗದೆ ಅಶ್ವತ್ಥಾಮ ಎನ್ನುವ ತನ್ನ ಮಗನೆ ಸತ್ತುಹೋಗಿದ್ದಾನೆಂದು ಅಂದುಕೊಳ್ಳುವುದು ನಡೆದಿದೆ. ಹೊರಗಿನಿಂದ ಬರುವ ಶಬ್ಧ ಜ್ಞಾನೇಂದ್ರಿಯವಾದ ಕಿವಿಗೆ ಕೇಳಿಸಿದಾಗ ಆ ಸಮಾಚಾರವನ್ನು ಮನಸ್ಸು ಒಳಗಿರುವ ಬುದ್ಧಿಗೆ ತಿಳಿಸಿದಾಗ, ಬುದ್ಧಿ ತಾನು ಗ್ರಹಿಸಿಕೊಂಡಿರುವುದನ್ನೇ ಜೀವಿಗೆ ತಿಳಿಸುತ್ತದೆ. ಬುದ್ಧಿ ಹೊರಗಿನ ಭಾವವನ್ನು ಗ್ರಹಿಸಿದಾಗ ಬುದ್ಧಿಯಿಂದ ಪ್ರಭಾವ ಹುಟ್ಟುತ್ತಿದೆ. ಹೊಸದಾಗಿ ಹುಟ್ಟಿದ ಭಾವವನ್ನು ಪ್ರಭಾವ ಎನ್ನುತ್ತಿದ್ದೇವೆ. ಪ್ರ ಎಂದರೆ ಹುಟ್ಟಿರುವುದೆಂದು ಒಂದು ಅರ್ಥವಾದರೆ, ಪ್ರ ಎಂದರೆ ಮುಖ್ಯವಾದುದೆಂದು ಸಹ ಅರ್ಥವಿದೆ. ಬುದ್ಧಿ ಗ್ರಹಿಸಿದ ಭಾವದಿಂದ ಪ್ರಭಾವ ಹುಟ್ಟುತ್ತಿದೆ. ಪ್ರಭಾವ ಮನುಷ್ಯನಲ್ಲಿ (ಜೀವಿಯಲ್ಲಿ) ಬದಲಾವಣೆಯನ್ನು ತಂದು ಮನುಷ್ಯನನ್ನು ಸುಖದುಃಖಗಳಿಗೆ ಒಳಗಾಗುವಂತೆ ಮಾಡುತ್ತಿದೆ.

ಭಾವ ಬೇರೆ ಪ್ರಭಾವ ಬೇರೆಯೆಂದು ತಿಳಿಯುತ್ತಿದೆ. ಭಾವಕ್ಕಿಂತ ಪ್ರಭಾವ ದೊಡ್ಡದೆಂದು ತಿಳಿದುಹೋಗುತ್ತಿದೆ. ಈಗ ಶರೀರದಲ್ಲಿನ ಗುಣಗಳ ವಿಷಯದವರೆಗು ಬಂದು ನೋಡೋಣ. ಗುಣಗಳಲ್ಲಿ ಪ್ರಭಾವ ಮಾತ್ರ ಇರುತ್ತದೆ. ಹೊರಗಿನ ವಿಷಯ ಕಿವಿಯ ಮೂಲಕ, ಮನಸ್ಸು ತಂದ ವಿಷಯ ಬುದ್ಧಿಗೆ ಸೇರಿದಾಗ ಬುದ್ಧಿ ಪಕ್ಕದಲ್ಲೆ ಇರುವ ಗುಣಗಳು, ಬಂದಿರುವ ಭಾವವನ್ನು ತಮ್ಮ ಪ್ರಭಾವದಿಂದ ಸೇರಿಸುತ್ತಿವೆ. ಬುದ್ಧಿಗೆ ವಿಷಯ ಭಾವನೆ ಸೇರುತ್ತಲೇ, ಗುಣಗಳೆ ಬುದ್ಧಿಗೆ ಬಂದಿರುವುದನ್ನು ತಮ್ಮ ಪ್ರಭಾವಕ್ಕೆ ಗುರಿಮಾಡುತ್ತಿವೆ. ಆದ್ದರಿಂದ ಬುದ್ಧಿ ಹತ್ತಿರವೆ ಭಾವ ಪ್ರಭಾವವಾಗಿ ತಯಾರಾಗುತ್ತಿದೆ. ಶರೀರದಲ್ಲಿ ಬುದ್ಧಿ ಜೀವಿಯನ್ನು ಅಂಟಿಕೊಂಡು ಒಂದು ಪೊರೆಯಾಗಿದೆ. ಜೀವಿಯು ದುಂಡನೆಯ ಮೂರು ಪೊರೆಗಳಿರುವ ಆಕಾರವಾಗಿದ್ದೂ ಮೂರು ಪೊರೆಗಳ ಮಧ್ಯದಲ್ಲಿರುವ ಶೂನ್ಯವಾಗಿದ್ದಾನೆ. ದುಂಡನೆ ಆಕಾರವಿರುವ ಜೀವಿಯು ಗುಣಚಕ್ರದಲ್ಲಿ ಗುಣಗಳಲ್ಲಿ ವಾಸಿಸುತ್ತಿದ್ದಾನೆ. ಜೀವಿಯು ಇರುವಸ್ಥಿತಿಯನ್ನು ದೃಶ್ಯರೂಪವಾಗಿ ನೋಡಿದರೆ ಕೆಳಗೆ ಬೊಂಬೆಯಲ್ಲಿನ ವಿಧವಾಗಿ ಇದೆ.



ಮೇಲಿನ ಚಿತ್ರದಲ್ಲಿ ರಾಜಸ ಗುಣಭಾಗದಲ್ಲಿ ಜೀವಿ ಇದ್ದಾನೆ. ತಾಮಸ, ರಾಜಸ, ಸಾತ್ತ್ವಿಕ ಎನ್ನುವ ಮೂರು ಗುಣ ಭಾಗಗಳಲ್ಲಿ ಒಂದೊಂದರಲ್ಲಿ ಹನ್ನೆರಡು ಗುಣಗಳಿರುತ್ತವೆ. ಹನ್ನೆರಡು ಗುಣಗಳು ಒಂದೊಂದು ಒಂದೊಂದು ಪ್ರಭಾವವನ್ನು ಹೊಂದಿರುತ್ತವೆ. ಜೀವಿಗೆ ಅಂಟಿಕೊಂಡಿರುವ ಬುದ್ಧಿಪೊರೆಯನ್ನು ಹೊರಗಿನಿಂದ ಬಂದಿರುವ ವಿಷಯ ಭಾವ ಸೇರುತ್ತಲೇ, ಆ ಭಾವಕ್ಕೆ ತಕ್ಕ ಗುಣ ಬಂದಿರುವ ಭಾವವನ್ನು ತನ್ನ ಪ್ರಭಾವವಾಗಿ ಬದಲಾಯಿಸುತ್ತಿದೆ. ಹನ್ನೆರಡು ಗುಣಗಳ ಪ್ರಭಾವಗಳು ಗುಣ ಭಾಗವೆಲ್ಲಾ ತುಂಬಿರುವಾಗ, ಜೀವಿಯು ಅದರಲ್ಲಿಯೇ ಇದ್ದಾನೆ. ಜೀವಿಯು ಗುಣಗಳ ಪ್ರಭಾವಗಳ ಪರಿಧಿಯಲ್ಲಿಯೇ ಇದ್ದರೂ ಹೊರಗಿನಿಂದ ವಿಷಯ ಸೇರುವವರೆಗು ಯಾವ ಗುಣ ಪ್ರಭಾವವೂ ಜೀವಿಯನ್ನು ಅಂಟಿಕೊಳ್ಳುವುದಿಲ್ಲ. ವಿಷಯ ಭಾವ ಮನಸ್ಸಿನಿಂದ ಬಂದು ಬುದ್ಧಿಯನ್ನು ಸೇರಿದ ತಕ್ಷಣವೇ, ಬಂದಿರುವ ವಿಷಯಕ್ಕೆ ಸರಿಹೋಗುವ ಗುಣವೊಂದರ ಪ್ರಭಾವ ಬುದ್ಧಿಯನ್ನು ಸೇರಿ ಬುದ್ಧಿಹತ್ತಿರವೆ ಬಂದಿರುವ ಭಾವವನ್ನು ಪ್ರಭಾವವಾಗಿ ಮಾಡುತ್ತಿದೆ. ಹಾಗೆ ಸೇರಿದ ಪ್ರಭಾವದಿಂದ ಕಾರ್ಯಗಳು ನಡೆಯುವುದೂ, ಜೀವಿಯು ಸುಖದುಃಖಗಳನ್ನು ಹೊಂದುವುದೂ ನಡೆಯುತ್ತಿದೆ.

ಭಾವನೆ ಎನ್ನುವುದು ಕಾಣಿಸುವುದಿಲ್ಲ ಎಂದಿದ್ದೇವೆ. ಹಾಗೆಯೇ ಪ್ರಭಾವ ಸಹಾ ಕಾಣಿಸದೆ ಜೀವಿಯ ಬುದ್ಧಿಮೇಲೆ, ಜೀವಿಯ ಮೇಲೆ ಒತ್ತಡ ತರುತ್ತದೆ. ಆ ಒತ್ತಡ ಬಲವಾದುದಾಗಿರುತ್ತದೆ. ಎಷ್ಟು ಬಲವಾದ ಒತ್ತಡವನ್ನು ಜೀವಿಯ ಮೇಲೆ ಗುಣ ತೋರಿಸುತ್ತಿದೆ ಎಂಬ ಪ್ರಶ್ನೆಗೆ ಉತ್ತರವಾಗಿ ಗುಣಚಕ್ರಕ್ಕಿಂತ ಮೇಲಿರುವ ಕರ್ಮಚಕ್ರದಲ್ಲಿರುವ ಕರ್ಮವನ್ನನುಸರಿಸಿ ಗುಣ ಪ್ರಭಾವ ಒತ್ತಡವೊಂದರ ಬಲ ಇರುತ್ತದೆಂದು ಹೇಳಬಹುದು. ಒಂದೇ ವಿಷಯ ಇಬ್ಬರಲ್ಲಿ ಸೇರಿದಾಗ ಅವರವರ ಕರ್ಮವನ್ನನುಸರಿಸಿ ಗುಣಗಳ ಒತ್ತಡ ಅವರ ಮೇಲೆ ಬೀಳುತ್ತದೆ. ಹಾಗೆ ಒಂದೇ ವಿಷಯದಲ್ಲಿ ಇಬ್ಬರು ಬೇರೆ ಬೇರೆ ಪ್ರಭಾವಗಳಿಗೆ ಗುರಿಯಾಗಿ ಬೇರೆ ಬೇರೆ ಒತ್ತಡಗಳು ಹೊಂದಿ, ಬೇರೆ ಬೇರೆ ಬಾಧೆಗಳನ್ನು

ಅನುಭವಿಸುತ್ತಿದ್ದಾರೆ. ಒಂದೇ ವಿಷಯದಲ್ಲಿ ಇಬ್ಬರು ಸಮಾನವಾಗಿ ಬಾಧೆಗಳಿಗೆ ಗುರಿಯಾಗದಿರುವುದಕ್ಕೆ ಅವರಲ್ಲಿರುವ ಬೇರೆ ಬೇರೆ ಕರ್ಮಗಳೆ ಕಾರಣವೆಂದು ತಿಳಿಯುತ್ತಿದೆ. ಈ ವಿಧವಾಗಿ ಒಬ್ಬ ಮನುಷ್ಯ ಒಂದು ಬಾಧೆಯನ್ನು ಅನುಭವಿಸಬೇಕೆಂದರೂ, ಇಲ್ಲವೆ ಸುಖವನ್ನನುಭವಿಸಬೇಕೆಂದರೂ, ಅವನಲ್ಲಿನ ಮನಸ್ಸಿನ ಮೂಲಕ ವಿಷಯ ಸೇರಬೇಕು. ಸೇರಿದ ವಿಷಯ ಬುದ್ಧಿಹತ್ತಿರ ಗುಣಪ್ರಭಾವಕ್ಕೆ ಗುರಿ ಆಗಬೇಕು. ಆ ಗುಣ ಪ್ರಭಾವ ಮೇಲಿರುವ ಕರ್ಮ ವನ್ನನುಸರಿಸಿ ಬಲವನ್ನು ಬೆಳಸಿಕೊಂಡು, ಜೀವಿಯಮೇಲೆ ಒತ್ತಡ ಮಾಡುತ್ತದೆ. ಆಗ ಕರ್ಮದಿಂದ ಬೆಳೆದ ಒತ್ತಡ ಬಲ ಎಷ್ಟು ಇದ್ದರೆ ಅಷ್ಟು ಜೀವಿಯು ತಪ್ಪದೆ ಅನುಭವಿಸಬೇಕಾಗಿ ಬರುತ್ತಿದೆ. ಇದು ಶರೀರದಲ್ಲಿ ಯಾರಿಗೂ ತಿಳಿಯದಂತೆ ನಡೆಯುವ ವಿಧಾನವೆಂದು ತಿಳಿಸುತ್ತಿದ್ದೇವೆ.

**ಪ್ರಶ್ನೆ :– ಎಷ್ಟೋ ಹೆಸರು ಪ್ರಖ್ಯಾತಿಗಳಿರುವ ಸ್ವಾಮೀಜಿಗಳು, ಪ್ರವಕ್ತರು, ಪ್ರಬೋಧಕರು, ಮತಹಿರಿಯರು, ಸ್ವಚ್ಛವಾದ ನಿಷ್ಠಾಗರಿಷ್ಠರು, ಏಕಾಗ್ರ ಚಿತ್ತ ಇರುವವರು, ಜ್ಞಾನಮಾರ್ಗದಲ್ಲಿ ಸತ್ ಪ್ರವರ್ತನೆ ಇರುವವರು ಎಷ್ಟೋಜನ ಇರುವಾಗ ಅವರೆಲ್ಲರೂ ಹೇಳದ ವಿಷಯವನ್ನು, ಅವರೆಲ್ಲರಿಗೂ ತಿಳಿಯದೆಂದು ನೀವು ಹೇಳಿದರೆ ಹೇಗೆ ನಂಬಬೇಕು?**

**ಉತ್ತರ :–** ನಾವು ಹೇಳಿರುವುದನ್ನು ತಪ್ಪದೆ ಎಲ್ಲರೂ ನಂಬಬೇಕು ಎಂದು ನಾವು ಎಲ್ಲಿ ಹೇಳಲಿಲ್ಲ. ಇಲ್ಲಿ ಸಹಾ ಇದು ಯಾರಿಗೂ ತಿಳಿಯದ ವಿಷಯ ತಿಳಿಸುತ್ತಿದ್ದೇವೆಂದು ಹೇಳಿದ್ದೇವಾಗಲಿ, ತಪ್ಪದೆ ನಮ್ಮ ಮಾತೇ ಸತ್ಯವೆಂದು ನೀವು ನಂಬಿರಿ ಎಂದು ಹೇಳಲಿಲ್ಲ, ಯಾರಾದರೂ ನಮ್ಮ ಮಾತನ್ನು ನಂಬುವುದಕ್ಕೆ, ನಂಬದಿರುವುದಕ್ಕೆ ಅವರ ಶರೀರದೊಳಗೆ ಒಂದು ವಿಧಾನವಿದೆಯೆಂದು ಸಹಾ ನಮಗೆ ತಿಳಿದಿದೆ. ಅಂತಹದರಲ್ಲಿ ಒಳಗಿರುವ ವಿಧಾನವನ್ನು ಅನುಸರಿಸಿ ಕೆಲವರು ನಂಬುತ್ತಾರೆ, ಕೆಲವರು ನಂಬುವುದಿಲ್ಲವೆಂದು ತಿಳಿದಿದೆ. ನಿಮಗೆ ಪೂರ್ತಿಯಾಗಿ ಅರ್ಥವಾಗುವಹಾಗೆ ಆ ವಿಧಾನವನ್ನು

ತಿಳಿಸುತ್ತೇನೆ ನೋಡಿರಿ, ಇದಕ್ಕು ಮುಂಚೆ ಹೊರಗಿನಿಂದ ವಿಷಯಗಳು ಶರೀರದಲ್ಲಿರುವ ಜೀವಿಯ ಹತ್ತಿರವಿರುವ ಬುದ್ಧಿಗೆ ಸೇರುತ್ತದೆಂದು ಹೇಳಿದ್ದೇವೆ. ಹಾಗೆಯೆ ಈಗ ಗ್ರಂಥರೂಪವಾಗಿ ಹೇಳುವ ಸಂಗತಿಗಳು ಸಹಾ ಓದುವ ಪ್ರತಿಯೊಬ್ಬರ ಶರೀರದಲ್ಲಿನ ಬುದ್ಧಿಗೆ ಸೇರುತ್ತದೆ. ಆದರೆ ಒಳಗೆ ಸೇರುವ ವಿಷಯಗಳನ್ನು ಮೊದಲಿಗೆ ನಾವು ಎರಡಾಗಿ ವಿಭಜಿಸಿಕೊಳ್ಳಬೇಕಾಗಿದೆ. ಒಂದು ಪ್ರಪಂಚ ವಿಷಯಗಳು, ಎರಡು ಪರಮಾತ್ಮ ವಿಷಯಗಳು, ಪ್ರಪಂಚ ವಿಷಯಗಳು ಒಳಗೆ ಸೇರಿದರೆ, ಇದಕ್ಕುಮೊದಲು ನಾವು ಹೇಳಿಕೊಂಡಹಾಗೆ ಬುದ್ಧಿಗೆ ಸೇರುವುದೂ, ಗುಣ ಪ್ರಭಾವವಾಗಿ ಬದಲಾಗುವುದು, ಅದು ಸಹಾ ಕರ್ಮಕ್ಕೆ ಒಳಪಟ್ಟು ನಡೆಯುವುದು ಇರುತ್ತದೆಂದು ತಿಳಿದುಕೊಂಡಿದ್ದೇವೆ. ಇಲ್ಲಿ ಒಳಗೆ ಸೇರಿದ ಪ್ರಪಂಚ ವಿಷಯವನ್ನು ನಂಬಬೇಕಾ ಬೇಡವಾ ಎನ್ನುವ ನಿರ್ಣಯವು ಕರ್ಮ ಆಧಾರದಿಂದಲೇ ಇರುತ್ತದೆ. ಒಳಗಿರುವ ಕರ್ಮವನ್ನನುಸರಿಸಿ ಯಾವ ವಿಷಯವನ್ನಾದರೂ ನಂಬುವುದೊ ನಂಬದಿರುವುದೊ ನಡೆಯುತ್ತದೆ. ಖಚಿತವಾಗಿ ನಂಬುತ್ತಾನೆಂದಾಗಲಿ, ನಂಬುವುದಿಲ್ಲ ಎಂದಾಗಲಿ ಹೇಳಲಾರೆವು. ಅದು ಅವರವರ ಕರ್ಮವನ್ನನುಸರಿಸಿ ಇರುತ್ತದೆ.

ಇನ್ನು ದೇವರ ವಿಷಯಗಳನ್ನು ಕುರಿತು ಹೇಳಿದರೆ, ಆಧ್ಯಾತ್ಮಿಕ ವಿಷಯಗಳೆಲ್ಲವು ಮನಸ್ಸಿನ ಮೂಲಕವೆ ಒಳಗೆ ಹೋಗಬೇಕಾಗಿರುತ್ತದೆ. ಪ್ರಪಂಚ ವಿಷಯಗಳು ಶರೀರದಲ್ಲಿನ ಜೀವಿಗೆ ಸೇರಿದಂತೆ ಪರಮಾತ್ಮ ವಿಷಯಗಳು ಸಹಾ ಒಳಗೆ ಜೀವಿಗೆ ಸೇರಬೇಕು. ಒಂದು ಆಧ್ಯಾತ್ಮಿಕ (ಆತ್ಮಕ್ಕೆ ಸಂಬಂಧಿಸಿದ) ವಿಷಯ ಕಿವಿಗೆ ಕೇಳಿಸಿಯೊ, ಇಲ್ಲವೆ ಕಣ್ಣಿನ ಮೂಲಕ ಓದಿ ಒಳಗೆ ಸೇರಿದಾಗ ಕಣ್ಣು, ಕಿವಿಗೆ ಸಮೀಪದಲ್ಲಿರುವ ಮನಸ್ಸು ಆ ವಿಷಯವನ್ನು ಒಳಗೆ ಜೀವಿಯ ಹತ್ತಿರವಿರುವ ಬುದ್ಧಿಗೆ ಸೇರಿಸುತ್ತದೆ. ಬುದ್ಧಿಗೆ ಸೇರಿದ ವಿಷಯ ಜೀವಿಗೆ ಸೇರಿದಂತೇ ಆಗುತ್ತದೆ. ಸೇರಿದ ವಿಷಯ ದೈವ ಸಂಬಂಧವಾದ ಜ್ಞಾನ ಆಗಿರುವುದರಿಂದ ಅಲ್ಲಿ ದೇವರ ಜ್ಞಾನ ವಿಷಯಗಳ ಮೇಲೆ ಕರ್ಮ ಕೆಲಸ ಮಾಡುವುದಿಲ್ಲ ಆದ್ದರಿಂದ ಗುಣ ಪ್ರಭಾವಗಳು ಜ್ಞಾನ ವಿಷಯಗಳ ಮೇಲೆ

ಇರುವುದಿಲ್ಲ. ಪ್ರಪಂಚ ವಿಷಯಗಳಾದರೆ ಅವು ಕರ್ಮಕ್ಕೆ ಒಳಗಾಗಿ ಗುಣಗಳ ಪ್ರಭಾವದಲ್ಲಿ ಮುಳುಗಿ, ಕರ್ಮ ಪ್ರಕಾರ ನಂಬುವುದೊ ನಂಬದಿರುವುದೊ ನಡೆಯುತ್ತದೆ. ಇಲ್ಲಿ ಜ್ಞಾನ ವಿಷಯಗಳಾಗಿರುವುದರಿಂದ ಕರ್ಮಕ್ಕೆ ಅತೀತವಾದುದು ಜ್ಞಾನ, ಆದ್ದರಿಂದ ಕರ್ಮ ಸ್ವಲ್ಪವೂ ಜ್ಞಾನವಿಷಯಗಳ ಮೇಲೆ ಕೆಲಸಮಾಡದಿರುವುದರಿಂದ, ಕರ್ಮವನ್ನನುಸರಿಸಿರುವ ಗುಣಗಳು ಸಹಾ ಕೆಲಸಮಾಡುವುದಿಲ್ಲ. ಆದ್ದರಿಂದ ಜ್ಞಾನ ವಿಷಯಗಳ ಸಂಬಂಧವಾಗಿ ಮನುಷ್ಯನಲ್ಲಿನ ಶ್ರದ್ಧೆ ಮಾತ್ರವೆ ಕೆಲಸಮಾಡುತ್ತದೆ. ಒಳಗೆ ಸೇರಿದ ಜ್ಞಾನ ವಿಷಯವನ್ನು ಅವನ ಶ್ರದ್ಧೆಯನ್ನನುಸರಿಸಿ ನಂಬುವುದೊ, ನಂಬದಿರುವುದೊ ನಡೆಯುತ್ತದೆ. "ಶ್ರದ್ಧಾವಾನ್ ಲಭತೇ ಜ್ಞಾನಂ" ಎನ್ನುವ ಭಗವದ್ಗೀತೆ ವಾಕ್ಯದ ಪ್ರಕಾರ ದೈವಜ್ಞಾನದ ಮೇಲೆ ಶ್ರದ್ಧೆ ಇದ್ದರೆ ಅವನ ಶ್ರದ್ಧೆಯನ್ನನುಸರಿಸಿ ಅವನು ವಿಶ್ವಸಿಸುವುದು ನಡೆಯುತ್ತದೆ. ಪೂರ್ತಿ ಶ್ರದ್ಧೆ ಇದ್ದರೆ ತಿಳಿದ ವಿಷಯದ ಮೇಲೆ ಪೂರ್ತಿ ವಿಶ್ವಾಸ ಏರ್ಪಡುತ್ತದೆ. ಕಡಿಮೆ ಶ್ರದ್ಧೆ ಇದ್ದರೆ ಕಡಿಮೆ ವಿಶ್ವಾಸ ಉಂಟಾಗುತ್ತದೆ. ಪೂರ್ತಿ ಶ್ರದ್ಧೆ ಇಲ್ಲದಿದ್ದರೆ ಆತನು ತಿಳಿದ ಜ್ಞಾನ ವಿಷಯವನ್ನು ನಂಬದಂತೆ ಬಿಡುತ್ತಾನೆ. ಆದ್ದರಿಂದ ಶದ್ಧೆ ಇಲ್ಲದವನಿಗೆ ಜ್ಞಾನ ಲಭಿಸುವುದಿಲ್ಲವೆಂದು ಹಿರಿಯರು ತಿಳಿಸುವುದು ನಡೆದಿದೆ. ಶ್ರದ್ಧೆಯನ್ನನುಸರಿಸಿ ಜ್ಞಾನವಾದ್ದರಿಂದ, ಈಗ ನಾವು ಹೇಳಿದ ವಿಷಯ ನಿಮ್ಮೊಳಗೆ ಸೇರಿದರೂ, ಅದು ನಿಮ್ಮ ಶ್ರದ್ಧೆಯನ್ನನುಸರಿಸಿ ನೀವು ನಂಬುವುದೊ, ನಂಬದಿರುವುದೊ ನಡೆಯುತ್ತದೆ. ಇದೆಲ್ಲವೂ ತಿಳಿದ ನಾನು ನಿಮ್ಮನ್ನು ನಂಬಿರೆಂದು ಹೇಗೆ ಹೇಳುತ್ತೇನೆ? ನಿಮ್ಮ ಶ್ರದ್ಧೆಯನ್ನನುಸರಿಸಿ ನನ್ನ ಜ್ಞಾನವನ್ನು ನೀವು ನಂಬುವುದೊ, ನಂಬದಿರುವುದೊ ನಡೆಯುತ್ತದೆ. ಅಷ್ಟೇಯಾಗಲಿ ಹೊರಗಿನ ವಕ್ತರು, ಪ್ರವಕ್ತರು, ಸ್ವಾಮೀಜಿಗಳು ಹೇಳಿದಷ್ಟುಮಾತ್ರಕ್ಕೆ ನಂಬುತ್ತಾರೆಂದು ಹೇಳಲಾರೆವು.

**ಪ್ರಶ್ನೆ :– ಗುಣಗಳು ಗುಣಚಕ್ರದಲ್ಲಿ ಕದಲದೆ ಮೆದಲದಿದ್ದರೂ, ಅವುಗಳ ಪ್ರಭಾವಗಳು ಗುಣಚಕ್ರವೆಲ್ಲವೂ ವ್ಯಾಪಿಸಿದ್ದು, ಹೊರಗಿನಿಂದ ಬಂದಿರುವ ವಿಷಯ ಬುದ್ಧಿಯನ್ನು ಸೇರಿದ ತಕ್ಷಣ ಅಲ್ಲಿ ಅಗತ್ಯವಾದ ಗುಣ ಪ್ರಭಾವ ಏರ್ಪಡುತ್ತಿದೆಯೆಂದು, ಅದು**

**ಅವನ ಕರ್ಮವನ್ನನುಸರಿಸಿ ಎಷ್ಟು ಕರ್ಮವಿರುತ್ತದೊ ಅಷ್ಟು ಬಲವಾದ ಪ್ರಭಾವ ಹೊಂದಿ ಜೀವಿಯ ಮೇಲೆ ಒತ್ತಡ ತರುತ್ತದೆಂದು ಹೇಳಿದ್ದಾರೆ. ಜೀವಿಯ ಮೇಲೆ ಗುಣಗಳ ಒತ್ತಡ ಉಂಟಾಗುತ್ತಿದೆಯಾ? ಇಲ್ಲವೆ ಕರ್ಮ ಒತ್ತಡ ಉಂಟಾಗುತ್ತಿದೆಯಾ?**

**ಉತ್ತರ :–** ಮನುಷ್ಯ ಅನುಭವಿಸಬೇಕಾಗಿರುವುದು ಏನಾದರೂ ಕರ್ಮ ಕಾರಣದಿಂದಲೇ ಅನುಭವಿಸುತ್ತಾನೆ. ಆದರೂ ಆ ಅನುಭವವೆಲ್ಲಾ ಗುಣಗಳ ಒತ್ತಡದಿಂದಲೇ ಇರುತ್ತದೆ. ಕರ್ಮ ಯಾರಮೇಲೆ ನೇರವಾಗಿ ಒತ್ತಡ ಮಾಡುವುದಿಲ್ಲ. ಮನುಷ್ಯನ ಮೇಲೆ ಗುಣಗಳ ಒತ್ತಡ ಹೊರತು ಕರ್ಮ ಒತ್ತಡ ಇರುವುದಿಲ್ಲ. ಆದ್ದರಿಂದ ಯಾರಾದರೂ ತಾನು ಯಾವ ಗುಣಗಳಿಂದ ದುಃಖವನ್ನು ಅನುಭವಿಸುತ್ತಿದ್ದೇನೆಂದು ತಿಳಿಯುತ್ತಾನೆ ಹೊರತು, ತಾನು ಯಾವ ಕರ್ಮದಿಂದ ದುಃಖವನ್ನು ಅನುಭವಿಸುತ್ತಿದ್ದೇನೆಂದು ಹೇಳಲಾರನು. ದುಃಖದ ಹಿಂದೆ ಕರ್ಮವೇ ಕಾರಣವಾದರೂ ಅದು ಯಾವ ಕರ್ಮವೊ, ಎಂತಹ ಕರ್ಮವೊ ಯಾರಿಗೂ ತಿಳಿಯದು. ಮನುಷ್ಯ ಅನುಭವಿಸುವ ಪ್ರತಿ ದುಃಖ ತನಗೆ ಯಾವ ಗುಣದಿಂದ ಬರುತ್ತಿದೆಯೊ ಹೇಳಬಲ್ಲನು. ಆದ್ದರಿಂದ ಅನುಭವಿಸುವ ಪ್ರತಿವೊಂದಕ್ಕು ಕರ್ಮ ಕಾರಣವಾಗಿದ್ದರೂ, ಅದು ನೇರವಾಗಿ ಮನುಷ್ಯನ ಮೇಲೆಬಿದ್ದು ಬಾಧಿಸದೆ, ಗುಣಗಳ ಪ್ರಭಾವವನ್ನು ಉಪಯೋಗಿಸಿ ಕೊಂಡು ಮನುಷ್ಯನನ್ನು ಬಾಧಿಸುತ್ತಿದೆ. ಪ್ರತಿ ಮನುಷ್ಯನಲ್ಲಿಯು ಹಾಗೆಯೇ ನಡೆಯುತ್ತಿದೆ. ಆದ್ದರಿಂದ ಮನುಷ್ಯನ ಮೇಲೆ ಗುಣಗಳ ಒತ್ತಡ ಹೊರತು ಕರ್ಮ ಒತ್ತಡ ಇರುವುದಿಲ್ಲವೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಗುಣಗಳ ಪ್ರಭಾವಕ್ಕೆ ಬಲ ಕರ್ಮದಿಂದ ಉಂಟಾಗುತ್ತಿದೆಯೆಂದು ಹೇಳಬಹುದು. ಕರ್ಮ ಎಷ್ಟು ಬಲವಾಗಿ ಇದ್ದರೆ ಅಷ್ಟು ಬಲವಾಗಿ ಗುಣ ಪ್ರಭಾವ ಬೆಳೆಯುತ್ತದೆ.

**ಪ್ರಶ್ನೆ :– ಕರ್ಮವನ್ನನುಸರಿಸಿ ಗುಣಪ್ರಭಾವ ಬೆಳೆಯುತ್ತದೆ ಅನ್ನುತ್ತಿದ್ದೀರಲ್ಲ! ಕರ್ಮ ಇಷ್ಟು ಇದ್ದರೆ ಗುಣ ಇಷ್ಟು ಬೆಳೆಯುತ್ತದೆಂದು ಅನ್ನುವುದಕ್ಕೆ ಏನಾದರೂ ಆಧಾರವಿದೆಯಾ? ಕರ್ಮವನ್ನನುಸರಿಸಿ ಗುಣವೊಂದರ ಪ್ರಭಾವ ಬೆಳೆ ಯುತ್ತದೆನ್ನುವುದಕ್ಕೆ ಶಾಸ್ತ್ರಾಧಾರ ಏನಾದರೂ ಇದೆಯಾ?**

**ಉತ್ತರ :–** ಸುಖವನ್ನಾಗಲಿ, ಕಷ್ಟವನ್ನಾಗಲಿ ಮನುಷ್ಯ ಅನುಭವಿಸುವಾಗ ಅದಕ್ಕೆ ಕಾರಣ ಕರ್ಮವೆ ಆದರೂ, ಆ ಕರ್ಮ ಏನೊ ಯಾರಿಗೂ ತಿಳಿಯದು. ಕೆಲವರಿಗೆ ಕಷ್ಟ ಸುಖಗಳಿಗೆ ಕರ್ಮ ಕಾರಣವೆಂಬ ವಿಷಯ ಸಹಾ ತಿಳಿಯದು. ಕೆಲವರಿಗೆ ಪ್ರತಿಯೊಂದು ಕೆಲಸಕ್ಕೂ, ಪ್ರತಿ ಸುಖಕ್ಕೂ, ಪ್ರತಿ ದುಃಖಕ್ಕೂ ಕರ್ಮವೇ ಕಾರಣವೆಂದು ತಿಳಿದರೂ, ಅವರಿಗೆ ನಡೆಯುವ ಕೆಲಸದಲ್ಲಿ, ಅನುಭವಿಸುವ ಕಷ್ಟದಲ್ಲಿ ಗುಣಗಳೆ ಕಾಣಿಸುತ್ತಿರುತ್ತವಾಗಲಿ, ಕರ್ಮ ಯಾರಿಗೂ ಕಾಣಿಸುತ್ತಿಲ್ಲ. ಆದ್ದರಿಂದ ಎಷ್ಟು ಕರ್ಮಕ್ಕೆ ಎಷ್ಟು ಸುಖ ಎಷ್ಟು ಕಷ್ಟವೆಂಬ ಮಾತೇ ಇಲ್ಲದಾಗೆ ಹೋಗಿದೆ. ಗುಣಗಳನ್ನನುಸರಿಸಿಯೆ ಕೆಲಸಗಳು, ಗುಣಗಳನ್ನನುಸರಿಸಿಯೆ ಕಷ್ಟ ಸುಖಗಳೆನ್ನುವಂತೆ ಬಹಳಜನರಿಗೆ ಅರ್ಥವಾಗಿದೆ. ಆದರೆ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ (ಧರ್ಮಶಾಸ್ತ್ರದ ಪ್ರಕಾರ) ಒಂದು ಗುಣಕ್ಕೆ ಒಂದು ಕರ್ಮ ಎನ್ನುವ ಸೂತ್ರವನ್ನು ಅನುಸರಿಸಿ ಗುಣದ ಹಿಂದೆ ಕರ್ಮವಿದೆಯೆಂದು ತಿಳಿಯುತ್ತಿದೆ. ಕರ್ಮ ವಿವರವನ್ನು ತಿಳಿಯಬೇಕೆಂದರೆ ಕರ್ಮಚಕ್ರವನ್ನು ಕುರಿತು ತಿಳಿಯಬೇಕು. ಕರ್ಮ ಚಕ್ರದಲ್ಲಿನ ಕರ್ಮಗಳು ಗುಣಗಳನ್ನನುಸರಿಸಿ ಏರ್ಪಟ್ಟಿರುತ್ತವೆ. ಒಳ್ಳೆಯ ಗುಣಗಳನ್ನನುಸರಿಸಿ ಒಳ್ಳೆಯ ಕರ್ಮವಾದ ಪುಣ್ಯವೂ, ಕೆಟ್ಟ ಗುಣಗಳನ್ನನುಸರಿಸಿ ಕೆಟ್ಟ ಕರ್ಮವಾದ ಪಾಪವೂ ಏರ್ಪಟ್ಟು ಕರ್ಮಚಕ್ರದಲ್ಲಿ ನೆಲೆ ಇರುತ್ತದೆ. ಹಾಗೆ ನೆಲೆ ಇರುವ ಕರ್ಮ ಕಾರಣದಿಂದಲೇ ಗುಣಗಳ ಪ್ರಭಾವ ಬೆಳೆಯುತ್ತಿದೆ. ಆದ್ದರಿಂದ ಕರ್ಮದಿಂದ ಗುಣಗಳೂ, ಗುಣಗಳಿಂದ ಕರ್ಮವೂ ಅವಿನಾಭಾವ ಸಂಬಂಧ ಹೊಂದಿವೆಯೆಂದು ಹೇಳಬಹುದು.

ಕರ್ಮ ಮೊದಲ, ಗುಣಗಳು ಮೊದಲ ಎಂದು ಹೇಳುವುದಕ್ಕೂ ಸಹ ಸಾಧ್ಯವಿಲ್ಲದ ವಿಧವಾಗಿರುವ ವಿಧಾನವನ್ನು ತಿಳಿಯುವುದಕ್ಕೆ ಕರ್ಮವನ್ನೇ ಮೊದಲು ತೆಗೆದುಕೊಂಡು ಮೇಲಿನ ಕರ್ಮಚಕ್ರದಿಂದ ಪರಿಶೋಧನೆ ಪ್ರಾರಂಭಿಸಬೇಕಾಗಿದೆ. ಕರ್ಮಚಕ್ರವನ್ನು ಜ್ಞಾನದೃಷ್ಟಿಯಿಂದ ನೋಡಲ್ಪಟ್ಟರೆ ಕರ್ಮಚಕ್ರ ಹನ್ನೆರಡು ಭಾಗಗಳಾಗಿದೆ. ಹನ್ನೆರಡು ಭಾಗಗಳಾಗಿ ವಿಭಜಿಸಲ್ಪಟ್ಟಿರುವ ಕರ್ಮಚಕ್ರದಲ್ಲಿ ಮುಖ್ಯವಾದ ಕರ್ಮಗಳು ಹನ್ನೆರಡು ಇವೆ. ಮನುಷ್ಯ

ಹುಟ್ಟಿದಾಗಿನಿಂದ ಸತ್ತುಹೋಗುವವರೆಗು ಮನುಷ್ಯನಿಗಿರುವ ಜೀವನವನ್ನು ಹನ್ನೆರಡು ಕರ್ಮಗಳೆ ಶಾಶಿಸಿ ನಡೆಸುತ್ತಿವೆ. ಅಂತಹ ಹನ್ನೆರಡು ಕರ್ಮಗಳು ಕರ್ಮಚಕ್ರದಲ್ಲಿನ ಹನ್ನೆರಡು ಭಾಗಗಳಲ್ಲಿ ಒಂದೊಂದು ಭಾಗದಲ್ಲಿ ಒಂದೊಂದು ಕರ್ಮ ನೆಲೆ ಇರುತ್ತದೆ. ಒಂದೊಂದು ಭಾಗದಲ್ಲಿನ ಒಂದೊಂದು ಕರ್ಮ ಒಂಭತ್ತು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಒಂದೊಂದು ಕರ್ಮ ಒಂಭತ್ತು ಭಾಗಗಳಾಗಿದ್ದು ಹನ್ನೆರಡು ಭಾಗಗಳಲ್ಲಿ 12X9=108 ಕರ್ಮಗಳಾಗಿ ಸೀಳಿಹೋಗಿವೆ.

ಕೆಳಗಿರುವ ಗುಣಚಕ್ರದಲ್ಲಿ ಒಂದೊಂದು ಭಾಗದಲ್ಲಿ ಹನ್ನೆರಡು ಗುಣಗಳು ಇವೆ. ಹನ್ನೆರಡು ಗುಣಗಳು ಸಹ ಒಂದೊಂದು ಒಂಭತ್ತು ಭಾಗಗಳಾಗಿ ವಿಭಜಿಸಲ್ಪಟ್ಟಿವೆ. ಈ ವಿಧವಾಗಿ ಹನ್ನೆರಡು ಗುಣಗಳು ಒಟ್ಟು 12X9=108 ಗುಣಗಳಾಗಿ ಸೀಳಿಹೋಗಿವೆ. ಮೇಲಿರುವ ಕರ್ಮಚಕ್ರದಲ್ಲಿ ಹನ್ನೆರಡು ಭಾಗಗಳಲ್ಲಿ ಕರ್ಮ 108 ವಿಧಗಳಾಗಿ ವಿಭಜಿಸಲ್ಪಟ್ಟಿರುವಾಗ, ಅದೇ ವಿಧವಾಗಿ ಕೆಳಗಿರುವ ಗುಣಚಕ್ರದಲ್ಲಿ ಸಹ ಹನ್ನೆರಡು ಗುಣಗಳು 108 ವಿಧಗಳಾಗಿ ವಿಭಜಿಸಲ್ಪಟ್ಟಿವೆ. ಮೇಲೆ ಕರ್ಮಚಕ್ರದಲ್ಲಿ ಕರ್ಮಗಳು, ಕೆಳಗಿನ ಗುಣಚಕ್ರದಲ್ಲಿನ ಗುಣಗಳು ಎರಡೂ ಸಮಾನವಾಗಿ ವಿಭಜಿಸಲ್ಪಟ್ಟಿರುವ ಹಾಗೆ ತಿಳಿದುಹೋಗಿದೆ. ಮನುಷ್ಯನ ಶರೀರದೊಳಗೆ ಹೊರಗಿನ ವಿಷಯು ಕಿವಿ ಶಬ್ಧವನ್ನು ಕೇಳುವುದರ ಮೂಲಕವಾಗಲಿ, ಕಣ್ಣು ಓದುವುದರಿಂದಾಗಲಿ, ಶರೀರದೊಳಗೆ ಪ್ರವೇಶಿಸಿದಾಗ ಶರೀರದಲ್ಲಿ ಜ್ಞಾನೇಂದ್ರಿಯಗಳ ವರೆಗೂ ವ್ಯಾಪಿಸಿರುವ ಮನಸ್ಸು ಆ ವಿಷಯವನ್ನು ಗ್ರಹಿಸಿ ತಲೆಯಲ್ಲಿರುವ ಬುದ್ಧಿಗೆ ಸೇರಿಸುತ್ತದೆ. ಬುದ್ಧಿಗೆ ವಿಷಯ ಸೇರಿದ ಕೂಡಲೇ ಅದಕ್ಕೆ ಸಂಬಂಧಿಸಿದ ಗುಣವೊಂದರ ಪ್ರಭಾವ ಕರ್ಮಾನುಸಾರ ಬುದ್ಧಿಗೆ ಸೇರುತ್ತದೆ. ಉದಾಹರಣೆಗೆ ಒಂದು ವ್ಯಾಪಾರ ವಿಷಯವನ್ನು ಕುರಿತು ಕೇಳಿದಾಗ ಆ ವಿಷಯ ಮನಸ್ಸಿನ ಮೂಲಕ ಬುದ್ಧಿಗೆ ಸೇರಿದಾಗ ಅದಕ್ಕೆ ಸಂಬಂಧಿಸಿದ ಗುಣ ಆಸೆ (ಕಾಮ) ಆಗಿರುವುದರಿಂದ ವ್ಯಾಪಾರ ವಿಷಯದಲ್ಲಿ ಲಾಭಕ್ಕೆ ಸಂಬಂಧಿಸಿದ ವಿಷಯವಾಗುವುದರಿಂದ, ಆಸೆ ಎಂಬ ಗುಣದಲ್ಲಿನ

ಒಂಭತ್ತು ಭಾಗಗಳಲ್ಲಿನ ದೊಡ್ಡ ಗುಣವೊಂದರ ಪ್ರಭಾವ ಬುದ್ಧಿ ಮೇಲೆ ಒತ್ತಡ ಉಂಟುಮಾಡಿದೆ. ಇಲ್ಲಿ ಮುಖ್ಯವಾಗಿ ತಿಳಿಯಬೇಕಾಗಿರುವುದೇನೆಂದರೆ! ಅಲ್ಲಿ ಬುದ್ಧಿಗೆ ಸೇರಿದ ಗುಣಯಾವುದಾದರೂ ಅದಕ್ಕೆ ಹನ್ನೆರಡರಷ್ಟು ಹೆಚ್ಚಾಗಿ ಗುಣಿಸಿ ಬಂದಿರುವ ಸಂಖ್ಯೆಯಷ್ಟು ಬಲ ಬುದ್ಧಿಮೇಲೆ ಒತ್ತಡ ಉಂಟುಮಾಡಿ ದೆಂದು ಹೇಳಬಹುದು. ಬುದ್ಧಿಗೆ ಒತ್ತಡ ಉಂಟಾದರೆ ಅದನ್ನು ಅಂಟಿಕೊಂಡಿರುವ ಜೀವಿಗೆ ಒತ್ತಡ ಉಂಟಾದಂತೆ ಎಂದು ತಿಳಿಯಬೇಕು. ಒಂಭತ್ತು ಆಸೆಗಳಲ್ಲಿ ದೊಡ್ಡ ಆಸೆ ಆ ವಿಷಯವನ್ನು ಸೇರಿ ಪ್ರಭಾವವನ್ನು ತೋರಿಸಿದಾಗ, ಆ ಪ್ರಭಾವ ಹನ್ನೆರಡರಷ್ಟು ಹೆಚ್ಚಾಗಿ ಬದಲಾಗಿ ಜೀವಿಯಮೇಲೆ ಒತ್ತಡ ತರುತ್ತಿದೆ. ಬುದ್ಧಿಗೆ ಅಂಟಿಕೊಳ್ಳುವ ಯಾವ ಗುಣವಾದರೂ ಮೇಲಿರುವ ಕರ್ಮವನ್ನನುಸರಿಸಿ ಹನ್ನೆರಡರಷ್ಟು ಗುಣಿಸಲ್ಪಟ್ಟು ಅಷ್ಟೇ ಬಲದಿಂದ ಜೀವಿಯಮೇಲೆ ಒತ್ತಡ ತರುತ್ತಿದೆ. ಹನ್ನೆರಡರಷ್ಟು ಗುಣಿಸಲ್ಪಡುವುದರಿಂದ ಅಲ್ಲಿ ಸೇರಿದ ಆಸೆ ಎನ್ನುವ ಭಾವವನ್ನು ಆಸೆ ಎಂಬ ಗುಣ ಅನ್ನುತ್ತಿದ್ದೇವೆ. ಗುಣಿಸಲ್ಪಡುವುದು ಗುಣ ಎನ್ನುವ ಹೆಸರುಹೊಂದಿದೆ. 108 ಸೀಳಿಕೆಗಳಾಗಿರುವ ಪ್ರತಿ ಗುಣ ಬುದ್ಧಿಗೆ ಸೇರಿದಾಗ ತನಗಿರುವ ಪ್ರಭಾವವನ್ನು ಹನ್ನೆರಡರಷ್ಟು ಹೆಚ್ಚಿಸಲ್ಪಡುತ್ತಿರುವುದರಿಂದ ಪ್ರತಿ ಭಾವವನ್ನು ಗುಣ ಅನ್ನುತ್ತಿದ್ದೇವೆ.

ಪ್ರತಿ ಗುಣ ತನಗಿರುವ ಪ್ರಭಾವವನ್ನು ಹನ್ನೆರಡರಷ್ಟು ಹೆಚ್ಚಿಸಿಕೊಂಡು ಜೀವಿಯಮೇಲೆ ಒತ್ತಡವನ್ನುಂಟುಮಾಡಿದರೂ, 108 ಗುಣಗಳಲ್ಲಿ ಯಾವ ಗುಣದಿಂದ ಬರುವ ಪಾಪ ಮತ್ತು ಪುಣ್ಯವಾದರೂ 108 ಕರ್ಮಗಳಾಗಿ ಬದಲಾಗಿ ಕರ್ಮಚಕ್ರದಲ್ಲಿ ಸೇರಿಹೋಗುತ್ತಿದೆ. ಕರ್ಮಚಕ್ರದಲ್ಲಿನ 108 ಕರ್ಮಗಳು ಕೆಳಗಿರುವ ಗುಣಚಕ್ರದಲ್ಲಿನ 108 ಗುಣಗಳಿಂದ ಏರ್ಪಡುತ್ತಿವೆಂದು ತಿಳಿಯಬೇಕು. ಗುಣಚಕ್ರದಲ್ಲಿನ ಆಸೆ ಎಂಬ ಗುಣ ಒಂಭತ್ತು ಭಾಗಗಳಾಗಿ ವಿಭಜಿಸಲ್ಪಟ್ಟು ದೊಡ್ಡ ಗುಣದಿಂದ ಕೊನೆಗೆ ಚಿಕ್ಕ ಗುಣದವರೆಗೂ ಪರಿಮಾಣವಿದೆಯೆಂದು ಹೇಳಿಕೊಂಡಿದ್ದೇವೆ. ಒಂದು ಗುಣ ಒಂಭತ್ತು ಭಾಗಗಳಾಗಿ ವಿಭಜಿಸಲ್ಪಟ್ಟಾಗ ಕೊನೆಯ ಚಿಕ್ಕ ಗುಣಕ್ಕೆ ಎರಡರಷ್ಟು ದೊಡ್ಡದಾಗಿ ಎಂಟನೆ ಗುಣ ಇರುವಾಗ,

ಎಂಟನೆಯದಕ್ಕೆ ಎರಡರಷ್ಟು ದೊಡ್ಡದಾಗಿ ಏಳನೆ ಗುಣವಿರುತ್ತದೆ. ಅದೇ ವಿಧವಾಗಿ ಏಳನೆಯದಕ್ಕೆ ಎರಡರಷ್ಟು ದೊಡ್ಡದಾಗಿ ಆರನೆ ಗುಣವಿರುತ್ತದೆ. ಹೀಗೆ ಒಂದಕ್ಕೊಂದು ಎರಡರಷ್ಟು ದೊಡ್ಡದಾಗಿದ್ದೂ ಕೊನೆಯ ದೊಡ್ಡ ಗುಣ ತಯಾರಾಗಿರುತ್ತದೆ.

ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಗಣಿತರೂಪದಲ್ಲಿ ವಿವರಿಸುತ್ತೇನೆ ನೋಡಿರಿ. ಚಿಕ್ಕ ಗುಣದಿಂದ ದೊಡ್ಡ ಗುಣದವರೆಗು ಹೇಗೆ ಪರಿಮಾಣ ಏರ್ಪಟ್ಟಿದೆಯೊ ಸಂಖ್ಯೆಗಳಲ್ಲಿ ವಿವರಿಸುತ್ತೇನೆ ನೋಡಿರಿ. ಇದು ಉದಾಹರಣೆ ಮಾತ್ರವೆ ಎಂದು ತಿಳಿಯಬೇಕು. ಒಂದು ದಬ್ಬೆಯನ್ನು(ಬಿದುರು ಕೋಲಿನಲ್ಲಿನ ಒಂದು ಸೀಳಿಕೆಯನ್ನು ದಬ್ಬೆ ಅನ್ನುತ್ತೇವೆ.) ಬಗ್ಗಿಸಿದರೆ ಎಷ್ಟು ಬಲದಿಂದ ಪುನಃ ಹಿಂದಕ್ಕೆ ಬರುತ್ತದೊ ಅದನ್ನು ಒಂದು ದಬ್ಬೆಬಲ ಅನ್ನುತ್ತೇವೆ. ಆಸೆ ಎನ್ನುವ ಕೊನೆಯ ಚಿಕ್ಕ ಗುಣ ಒಂದು ದಬ್ಬೆಯಷ್ಟು ಪರಿಮಾಣ ಬಲ ಹೊಂದಿರುವಾಗ, ಎರಡನೆಯದು ಎರಡು ದಬ್ಬೆಗಳಷ್ಟು ಪರಿಮಾಣ, ಬಲ ಹೊಂದಿದೆ. ಮೂರನೆ ಆಸೆ ನಾಲ್ಕು ದಬ್ಬೆಗಳಷ್ಟು ಪರಿಮಾಣ ಮತ್ತು ಬಲ ಹೊಂದಿದೆ. ನಾಲ್ಕನೆ ಗುಣ ಎಂಟು ದಬ್ಬೆಗಳಷ್ಟು ಪರಿಮಾಣ, ಬಲ ಹೊಂದಿದೆ. ಹಾಗೆ ಐದನೆ ಗುಣ 16 ದಬ್ಬೆಗಳ ಬಲ, ಪರಿಮಾಣ ಹೊಂದಿದೆ. ಆರನೆ ಆಸೆ ಎನ್ನುವ ಗುಣ 32 ರಷ್ಟು ದಬ್ಬೆಗಳ ಬಲ, ಪರಿಮಾಣ ಹೊಂದಿದೆ. ಹಾಗೆ ಏಳನೆ ಆಸೆ ಎನ್ನುವ ಗುಣ 64 ರಷ್ಟು ದಬ್ಬೆಗಳ ಪರಿಮಾಣ ಬಲ ಹೊಂದಿದೆ. ಎಂಟನೆ ಆಸೆ ಎನ್ನುವ ಗುಣ 128 ದಬ್ಬೆಗಳ ಪರಿಮಾಣ ಮತ್ತು ಬಲ ಹೊಂದಿದೆ. ಕೊನೆಯ ದೊಡ್ಡದಾದ ಆಸೆ ಎನ್ನುವ ಗುಣ 256 ದಬ್ಬೆಗಳ ಪರಿಮಾಣ ಮತ್ತು ಬಲ ಹೊಂದಿದೆ. ಈ ವಿಧವಾಗಿ ಆಸೆ ಎನ್ನುವ ಒಂಭತ್ತು ಗುಣಗಳು ಪರಿಮಾಣದಲ್ಲಿ ಚಿಕ್ಕದನ್ನು ಮೊದಲುಗೊಂಡು ದೊಡ್ಡದವರೆಗು ಹೇಗಿವೆಯೆಂದು ನೋಡಿದಾಗ ಚಿಕ್ಕದು ಒಂದು ದಬ್ಬೆಯ ದಪ್ಪಹೊಂದಿ, ಒಂದು ದಬ್ಬೆಬಲ ಹೊಂದಿದೆ. ಚಿಕ್ಕ ಆಸೆಯಿಂದ ಕೊನೆಯ ದೊಡ್ಡ ಆಸೆವರೆಗು ನೋಡಿದರೆ ಕೊನೆಯ ದೊಡ್ಡ ಆಸೆ 256 ದಬ್ಬೆಗಳ ದಪ್ಪ ಹೊಂದಿ ಮತ್ತು ಬಲ ಹೊಂದಿರುವ

ಹಾಗೆ ತಿಳಿಯುತ್ತಿದೆ. ಆಸೆ (ಕಾಮ) ಎನ್ನುವ ಗುಣ ಹೇಗೆ ಒಂಭತ್ತು ಭಾಗಗಳಾಗಿದ್ದೂ ದಪ್ಪದಲ್ಲಿಯೂ, ಬಲದಲ್ಲಿಯೂ ಹೇಗಿದೆಯೋ ಹಾಗೆ ಉಳಿದ ಹನ್ನೊಂದು ಗುಣಗಳು ಪರಿಮಾಣದಲ್ಲಿಯೂ, ಬಲದಲ್ಲಿಯೂ ಆಸೆ ಎನ್ನುವ ಗುಣದಂತೆ ಇವೆ. ಹನ್ನೆರಡು ಗುಣಗಳು ಒಂದೊಂದು ಒಂಭತ್ತು ಭಾಗಗಳಾಗಿದ್ದು ಒಟ್ಟಾರೆ 108 ಸೀಳಿಕೆಗಳಾಗಿವೆ.

ವಿಷಯ ಭಾವ ಬುದ್ಧಿಗೆ ಸೇರಿದಾಗ ಅದು ಗುಣ ಪ್ರಭಾವವಾಗಿ ಬದಲಾಗಿಹೋಗುತ್ತದೆ. ಹಾಗೆ ಬದಲಾಗಿಹೋಗಿರುವುದು ಮೇಲೆ ಕರ್ಮವನ್ನನುಸರಿಸಿ ಇರುತ್ತದೆ. ಕರ್ಮ ಎಷ್ಟನೇ ಭಾಗವಾಗಿ ಇದೆಯೊ ಅಷ್ಟರ ಸೀಳಿಕೆ ಗುಣ ಬುದ್ಧಿಯನ್ನು ತಗುಲಿಕೊಂಡಾಗ ಅದು ಹನ್ನೆರಡರಷ್ಟು ಗುಣಿಸಲ್ಪಟ್ಟು ಪೂರ್ತಿ ಗುಣ ಪ್ರಭಾವವಾಗಿ ಬದಲಾಗಿಹೋಗುತ್ತದೆ. ಈ ವಿಧವಾಗಿ ಕರ್ಮವೊಂದರ ಒಂಭತ್ತು ಭಾಗಗಳಲ್ಲಿ ಯಾವುದು ಇದೆಯೊ ಅದಕ್ಕೆ ಸರಿಹೋಗುವ ಒಂಭತ್ತು ಗುಣ ಭಾಗಗಳಲ್ಲಿನ ಒಂದು ಗುಣ ಬುದ್ಧಿಗೆ ಸೇರಿದಾಗ ಅದು ಹನ್ನೆರಡರಷ್ಟು ಗುಣಿಸಲ್ಪಡುವುದರಿಂದ ಗುಣ ಎನ್ನುವ ಹೆಸರು ಗುಣಿಸಲ್ಪಡುವ ಅರ್ಥ ಕೊಡುತ್ತಿದೆಂದು ಅರ್ಥವಾಗುತ್ತಿದೆ. ಹೀಗೆ ಪ್ರತಿ ದಿನವೂ ಪ್ರತಿ ವಿಷಯದಲ್ಲಿಯೂ ಮನುಷ್ಯ ಶರೀರದಲ್ಲಿ ಕರ್ಮ ಭಾಗವನ್ನನುಸರಿಸಿ ಗುಣಭಾಗ ಬಂದು, ಅದು ಹನ್ನೆರಡರಷ್ಟಾಗಿ ಗುಣಿಸಲ್ಪಟ್ಟು ಬುದ್ಧಿಯನ್ನು ಅಂಟಿಕೊಂಡು ಕೊನೆಗೆ ಜೀವಿಯಮೇಲೆ ಒತ್ತಡ ಉಂಟುಮಾಡುತ್ತಿದೆ. ಶರೀರದಲ್ಲಿನ ಪುಣ್ಯ ಕರ್ಮವಾಗಲಿ, ಪಾಪಕರ್ಮವಾಗಲಿ, ಗುಣಗಳ ಮೂಲಕವೇ ಮನುಷ್ಯನನ್ನು ಒತ್ತಡಕ್ಕೆ ಒಳಗಾಗುವಂತೆ ಮಾಡುತ್ತಿವೆ. ಪುಣ್ಯಕರ್ಮ ಆರು ಒಳ್ಳೆಯ ಗುಣಗಳಲ್ಲಿ ಸೀಳಿಕೆಯಾದ 54 ಗುಣಭಾಗಗಳಲ್ಲಿನ ಒಂದು ಸೀಳಿಕೆ ಗುಣವನ್ನು ಪ್ರೇರೇಪಿಸಿ ಬುದ್ಧಿಗೆ ತಗುಲಿಕೊಳ್ಳುವಂತೆ ಮಾಡುತ್ತಿದೆ. ಹಾಗೆ ಬುದ್ಧಿಗೆ ಸೇರಿದ ಗುಣ ಪ್ರಭಾವ ಹನ್ನೆರಡರಷ್ಟು ಹೆಚ್ಚಿಸಲ್ಪಟ್ಟು (ಗುಣಿಸಲ್ಪಟ್ಟು) ಅಷ್ಟು ಬಲದಿಂದ ಜೀವಿಯಮೇಲೆ ಸುಖ ಎನ್ನುವ ಒತ್ತಡವನ್ನು ತರುತ್ತಿದೆ. ಆಗ ಜೀವಿಯು ಸುಖ ಎನ್ನುವ ಒತ್ತಡವನ್ನು ಹಾಯಾಗಿ ಅನುಭವಿಸುತ್ತಿದ್ದಾನೆ.

ಹಾಗೆ ಕೆಲವು ವಿಷಯಗಳಲ್ಲಿ ಪಾಪದ ಗುಣಬಂದಾಗ ಕೊನೆಗದು ಹೆಚ್ಚಿಸಲ್ಪಟ್ಟು ಬುದ್ಧಿ ಮೂಲಕ ಜೀವಿಯ ಮೇಲೆ ಒತ್ತಡ ತಂದಾಗ ಜೀವಿಯು ಕಷ್ಟ ಅಥವಾ ಬಾಧೆ ಎನ್ನುವ ಒತ್ತಡವನ್ನು ಹೊಂದುತ್ತಿದ್ದಾನೆ. ಈ ವಿಧವಾಗಿ ಕರ್ಮಗಳನ್ನು ಅನುಭವಿಸುವುದರಲ್ಲಿ ಗುಣಗಳ ಪಾತ್ರ ಮುಖ್ಯವಾಗಿದೆ. 108 ಭಾಗಗಳಾಗಿರುವ ಹನ್ನೆರಡು ಗುಣಗಳು ಹನ್ನೆರಡರಿಂದ ಗುಣಿಸಲ್ಪಟ್ಟು ಹನ್ನೆರಡರಷ್ಟು ಗುಣ ಪ್ರಭಾವವನ್ನು ತೋರಿಸುತ್ತಾ ಕರ್ಮಗಳನ್ನು ಅನುಭವಿಸುವಂತೆ ಮಾಡುತ್ತಿವೆ.

ಗುಣಚಕ್ರದಲ್ಲಿನ ಒಂದು ಗುಣಭಾಗದಲ್ಲಿ ಹನ್ನೆರಡು ಗುಣಗಳಿವೆ. ಮೂರು ಗುಣ ಭಾಗಗಳಲ್ಲಿ ಒಟ್ಟು ಮೂವತ್ತಾರು ಗುಣಗಳಿರುವಾಗ ಅವು ಗಳೆಲ್ಲವುಗಳ ಪ್ರಭಾವವನ್ನು ಮಾಯೆ ಎಂಬ ಹೆಸರಿನಿಂದ ಕರೆಯುತ್ತಿದ್ದೇವೆ. ಮಾಯೆ ಎನ್ನುವ ಗುಣಗಳ ಪ್ರಭಾವವನ್ನು ಯಾರೂ ಜಯಿಸಲಾರರೆಂದು "ಮಮ ಮಾಯಾ ದುರತ್ಯಯಾ" ಎಂದು ಗೀತೆಯಲ್ಲಿ ಸಹಾ ಹೇಳಿದ್ದಾರೆ. ದೇವರು ಮನುಷ್ಯನಾಗಿ (ಭಗವಂತನಾಗಿ) ಹುಟ್ಟಿದರೂ ಆತನ ಶರೀರದಲ್ಲಿ ಸಹಾ ಗುಣಗಳಿರುವುದರಿಂದ ಮಾಯೆ ಎನ್ನುವ ಗುಣ ಪ್ರಭಾವ ಭಗವಂತನ ಮೇಲೆ ಸಹಾ ಇರುತ್ತದೆಂದು ತಿಳಿಸುವುದಕ್ಕೆ ದೇವಾಲಯಗಳಲ್ಲಿ ಸಾಕಾರ ಪ್ರತಿಮೆಯಾಗಿರುವ ಭಗವಂತನ ಪ್ರತಿಮೆ ಸುತ್ತಾ ಮಾಯೆ ಆವರಿಸಿರುವಂತೆ ಸಿಂಹತಲಾಟವನ್ನು ಇಟ್ಟಿರುತ್ತಾರೆ. ಸಿಂಹತಲಾಟವನ್ನು "ಪ್ರಭಾವಳಿ" ಎಂಬ ಹೆಸರಿನಿಂದ ಸಹಾ ಕರೆಯುತ್ತಾರೆ. ಮಾಯೆ ಪ್ರಭಾವವನ್ನು ತಿಳಿಸುವುದಾದ್ದರಿಂದ ಸಿಂಹತಲಾಟವನ್ನು ಪ್ರಭಾವಳಿ ಎಂದು ಅನ್ನುವುದು ನಡೆಯುತ್ತಿದೆ. ಮಾಯೆ ಎನ್ನುವುದು ಗುಣಗಳ ಪ್ರಭಾವದಿಂದ ಯಾರನ್ನು, ಎಂತಹವರನ್ನು ಬಿಡುತ್ತಿಲ್ಲ. ಮಾಯೆ, ದೇವರು ಭಗವಂತನಾಗಿ ಮನುಷ್ಯ ರೂಪದಲ್ಲಿ ಬಂದರೂ ಆತನನ್ನು ಸಹಾ ತನ್ನ ಪ್ರಭಾವದೊಳಗೇ ಇರುವಂತೆ ಮಾಡುತ್ತೇನೆಂದು ದೇವಾಲಯಗಳಲ್ಲಿ ಪ್ರಭಾವಳಿ ಎನ್ನುವ ಹೆಸರಿನಿಂದ ಸಿಂಹತಲಾಟ ಕಾಣಿಸುತ್ತಿರುವಾಗ, ನಾನು ಜ್ಞಾನಮಾರ್ಗದಲ್ಲಿ ಇದ್ದೇನೆನ್ನುವವರನ್ನಾಗಲಿ, ನಾನು ಸ್ವಾಮಿಜೀ ಎನ್ನು ವವರನ್ನಾಗಲಿ ಬಿಡದಂತೆ ನಿಧಾನವಾಗಿ ಅಜ್ಞಾನ ಮಾರ್ಗದೊಳಗೆ ಹೋಗುವಂತೆ

ಮಾಡಿ ದೇವರನ್ನು ತಿಳಿಯದಂತೆ ಮಾಡುತ್ತಿದೆ. ಯಾರಾದರೆ ಅಸಲಾದ ದೇವರನ್ನು ಆಶ್ರಯಿಸಿ ಆತನನ್ನೇ ಧರ್ಮಯುಕ್ತವಾಗಿ ವಿಶ್ವಾಸಿ ಸಿದಂತಾದರೆ ಅಂತಹವನನ್ನು ಮಾಯೆ ಏನು ಮಾಡುವುದಿಲ್ಲ, ಹಾಗಲ್ಲದೆ ಸ್ವಲ್ಪ ಅಧರ್ಮವಾಗಿ ಪ್ರವರ್ತಿಸಿದರೂ ಮಾಯೆ ತನ್ನ ಗುಣ ಪ್ರಭಾವಕ್ಕೆ ಮನುಷ್ಯ ನನ್ನು ಗುರಿಮಾಡಿ ಅಜ್ಞಾನದಕಡೆ ಕಳಿಸುತ್ತದೆ.

ಭೂಮಿಮೇಲೆ ಹುಟ್ಟಿದ ಯಾವ ಮನುಷ್ಯನನ್ನಾದರೂ ಗುಣ ರೂಪದಲ್ಲಿರುವ ಮಾಯೆ ದೇವರಕಡೆ ಹೋಗದಹಾಗೆ ಮಾಡುತ್ತಿದೆ. ಮನುಷ್ಯ ವೊಂದರ ವಿದ್ಯಾಭ್ಯಾಸದಲ್ಲಿ ಒಂದು ವಿದ್ಯೆಯನ್ನು ಕಲಿತು, ಒಂದು ತರಗತಿ ದಾಟಿ ಈತನು ಈ ವಿದ್ಯೆಯನ್ನು ತಿಳಿದವನೆಂದು ಹೆಸರು ಪಡೆಯುವುದಕ್ಕೆ ಹನ್ನೆರಡು ಪಾಠ್ಯಾಂಶಗಳನ್ನು ಪೂರ್ತಿ ಕಲಿತು ಹನ್ನೆರಡು ಪಾಠ್ಯಾಂಶಗಳನ್ನು ಪರೀಕ್ಷೆಯಲ್ಲಿ ಬರೆದು ಅವುಗಳಲ್ಲಿ ಉತ್ತೀರ್ಣನಾಗಬೇಕಾಗಿರುತ್ತದೆ. ಒಂದು ಪಾಠ್ಯಾಂಶದಲ್ಲಿ ಅಂಕಗಳು ಕಡಿಮೆ ಬಂದರೂ ಆತನು ಆ ವಿದ್ಯೆಯನ್ನು ಕಲಿತ ಗೌರವವಾಗಲಿ, ಗುರುತಾಗಲಿ ಬರುವುದಿಲ್ಲ. ಕೊನೆಗೆ ಆತನು ವಿದ್ಯಾವಂತ ಎಂದು ಕರೆಯಲ್ಪಡುವುದಕ್ಕೆ ಹೇಗೊ ಮಾಡಿ ಆತನಿಗಿರುವ ಎಲ್ಲಾ ಪಾಠಗಳಲ್ಲಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕಾಗಿರುತ್ತದೆ. ವಿದ್ಯಾವಂತನಾಗುವುದಕ್ಕೆ ಪರೀಕ್ಷೆ ಹೇಗೆ ಇರುತ್ತದೊ, ಹಾಗೆಯೇ ಮನುಷ್ಯ ಪೂರ್ತಿ ಜ್ಞಾನವಂತನಾಗುವುದಕ್ಕೆ ಮಾಯೆ ಎನ್ನುವ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕಾಗಿರುತ್ತದೆ. ಆದರೆ ದೇವರ ಮೇಲೆ ಸಂಪೂರ್ಣ ವಿಶ್ವಾಸ ಇಲ್ಲದವನು ಧರ್ಮಬದ್ಧವಾಗಿ ನಡೆಯದವನು ಮಾಯೆ ಪ್ರಭಾವಕ್ಕೊಳಗಾಗಿ ಮಾಯೆಯನ್ನು ಜಯಿಸಲಾರದೆ ಗುಣಗಳನ್ನು ಗೆಲ್ಲಲಾರದೆ ಮಾಯೆಯಲ್ಲಿಯೆ ಸಿಲುಕಿಕೊಂಡಿರುತ್ತಾನೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಬಿಟ್ಟು ಯಾರು ಪ್ರವರ್ತಿಸುತ್ತಾರೊ, ಧರ್ಮಶಾಸ್ತ್ರ ಎಂದರೆ ಏನೊ ತಿಳಿಯದೆ ತನಗಿಷ್ಟಬಂದಂತೆ ಯಾರು ಪ್ರವರ್ತಿಸುತ್ತಾರೊ, ಪ್ರಪಂಚ ಲಾಭಗಳಿಗೋಸ್ಕರ ಬ್ರಹ್ಮವಿದ್ಯೆಯನ್ನು ಯಾರು ಉಪಯೋಗಿಸಿಕೊಳ್ಳುತ್ತಾರೊ ಅವನು ಎಂದಿಗೂ ಮಾಯೆಯನ್ನು ದಾಟಲಾರನು.

ಭೂಮಿ ಮೇಲೆ ಎಷ್ಟು ದೊಡ್ಡ ಹೆಸರು ಸಂಪಾದಿಸಿಕೊಂಡ ಜ್ಞಾನಿಯನ್ನಾಗಲಿ ಮಾಯೆ ಬಿಡುತ್ತಿಲ್ಲ. ದೈವದೃಷ್ಠಿಯಲ್ಲಿ ಎಂದರೆ ದೈವ ಧರ್ಮಗಳನ್ನು ಅತಿಕ್ರಮಿಸದಂತೆ ಆಚರಿಸುವವನು ಮಾತ್ರವೆ ಮಾಯೆಯನ್ನು ದಾಟಿ ದೈವವನ್ನು ಸೇರುತ್ತಾನೆ. ಪ್ರಕೃತಿ ಶಕ್ತಿ ಮಾಯಾಶಕ್ತಿಯಾಗಿ ಇರುವಾಗ, ಮಾಯಾಶಕ್ತಿ ಗುಣಗಳ ಶಕ್ತಿಯಾಗಿದೆ. ಹನ್ನೆರಡು ಗುಣಗಳಶಕ್ತಿ ಜೀವಿಯನ್ನು ದೇವರಕಡೆ ಹೋಗದಹಾಗೆ ಮಾಡುತ್ತಿದೆ. ಮಾಯೆ ಎನ್ನುವುದು ದೇವರಿಗೆ ವಿರುದ್ಧವಾದುದಾ ಎಂದು ಅಂದರೆ ಹಾಗೆಯೂ ಸಹಾ ಅಲ್ಲ. ಮಾಯೆಯನ್ನು ತಯಾರು ಮಾಡಿದವನು ದೇವರೆ. ದೈವ ನಿರ್ಮಿತವಾದ ಮಾಯೆಯನ್ನು ದೇವರು ತನ್ನ ಗ್ರಂಥವಾದ ಭಗವದ್ಗೀತೆಯಲ್ಲಿ "ನನ್ನ ಮಾಯೆ" ಎಂದು ಅರ್ಥಬರುವಹಾಗೆ "ಮಮ ಮಾಯಾ" ಎಂದು ಹೇಳಿದ್ದಾನೆ. ದೇವರಿಗೆ ಯಾವನು ಇಷ್ಟವಾಗಿರುತ್ತಾನೊ ಅವನನ್ನೇ ಪ್ರಕೃತಿಶಕ್ತಿಯಾದ ಮಾಯೆ ತನ್ನ ಆತಂಕ ಇಲ್ಲದಹಾಗೆ ಮಾಡಿ ದೈವಮಾರ್ಗದಲ್ಲಿ ಮುಂದಕ್ಕೆಹೋಗುವಂತೆ ಮಾಡುತ್ತದೆ. ಹಾಗೆ ದೇವರಿಗೆ ಇಷ್ಟವಿಲ್ಲದ ಕೆಲಸಗಳನ್ನು ಯಾರು ಮಾಡುತ್ತಾರೊ ಅಂತಹವರನ್ನು ಮಾಯೆ ತನ್ನನ್ನು ಜ್ಞಾನದಲ್ಲಿ ಇರುವಂತೆ ಭ್ರಮೆಗೊಳಿಸಿ ದೇವರಿಗೆ ದೂರವಾಗಿ ಕಳುಹಿಸುತ್ತದೆ. ಮಾಯೆಯನ್ನು ಕುರಿತು, ಮಾಯ ಮನುಷ್ಯರನ್ನು ಮೋಸಗೊಳಿಸುವುದನ್ನು ಕುರಿತು, ಮಾಯೆ ವಿಧಾನಗಳನ್ನು ಕುರಿತು ಯಾರೂ ಹೇಳಲಿಲ್ಲ, ಮಾಯೆಯನ್ನು ಕುರಿತು ಪೂರ್ತಿಯಾಗಿ ಯಾರಿಗೂ ತಿಳಿಯದು. ಆದ್ದರಿಂದ ಮಾಯೆ ಮನುಷ್ಯರನ್ನು ಎಲ್ಲಾ ವಿಧಗಳಲ್ಲಿ ಆತಂಕಪಡಿಸುತ್ತಾ ದೇವರಕಡೆ ಹೋಗದಂತೆ ಮಾಡಬಲ್ಲದು. ದೇವರಕಡೆಯೇ ಹೋಗುತ್ತಿದ್ದೇನೆಂದು ಭ್ರಮಿಸುವಂತೆ ಮಾಡಿ ದೇವರಿಗೆ ದೂರವಾಗಿ ಕಳಿಸುತ್ತದೆ. ದೈವಮಾರ್ಗದಲ್ಲಿ ಜಾಗರೂಕನಾಗಿ ಇಲ್ಲದಿದ್ದರೆ ನನ್ನನ್ನು ಸಹಾ ಮಾಯೆ ಬಿಡುವುದಿಲ್ಲ. ಆದ್ದರಿಂದ ಯಾವಾಗಲೂ ಜಾಗ್ರತೆಯಾಗಿರುವುದಕ್ಕೆ ನಾನು ಪ್ರಯತ್ನಿಸುತ್ತಿದ್ದೇನೆ.

ಇಲ್ಲಿಯವರೆಗು ನನಗೆ ತಿಳಿದಷ್ಟು ಮಾಯೆಯನ್ನು ಕುರಿತು ಹೇಳಿದ್ದೇನೆ. ಮಾಯೆಯನ್ನು ವಿಂಗಡಿಸಿ ನೋಡಿದರೆ ಅದು ಗುಣಗಳ ರೂಪದಲ್ಲಿ ಇದೆ. ಪ್ರತಿ ಮನುಷ್ಯ ಶರೀರದಲ್ಲಿ ಹನ್ನೆರಡು ಗುಣಗಳ ರೂಪದಲ್ಲಿರುವ ಮಾಯೆ ತನ್ನ ಗುಣಗಳಿಂದ ಪ್ರತಿ ಮನುಷ್ಯನನ್ನು ನಡೆಸುತ್ತಿದೆ. ಮಾಯೆಯನ್ನು ವಿಶ್ಲೇಷಿಸಿದರೆ ಅದು ಗುಣಗಳಾಗಿ ಇದೆಯೆಂದು ಹೇಳಿದ್ದೇವೆ ಅಲ್ಲವೆ! ಗುಣಗಳಾಗಿರುವ ಮಾಯೆಯೆಲ್ಲವೂ ಮನುಷ್ಯನ ಮೇಲೆ ಪ್ರಭಾವ ತೋರಿಸುವುದಿಲ್ಲ. ಒಂದು ಸಮಯದಲ್ಲಿ, ಒಂದು ವಿಷಯದಲ್ಲಿ, ಒಂದು ಗುಣ ಸೀಳಿಕೆಯಿಂದ ಮನುಷ್ಯನನ್ನು ಕರ್ಮ ಅನುಭವಿಸುವಂತೆ ಮಾಡುತ್ತಿದೆ. ಕರ್ಮದಲ್ಲಿ ಸಿಲುಕಿಕೊಳ್ಳುವಹಾಗೆ ಮಾಡುತ್ತಿದೆ. 108 ಗುಣ ಸೀಳಿಕೆಗಳಲ್ಲಿ ಒಂದು ಸಮಯದಲ್ಲಿ ಒಂದು ಸೀಳಿಕೆ ಕೆಲಸ ಮಾಡುವುದರಿಂದ ಅದು ಹನ್ನೆರಡು ಭಾಗಗಳ ಬಲವನ್ನು ಕೈಗೂಡಿಸಿ ಕೊಂಡು ಮನುಷ್ಯನನ್ನು ಕರ್ಮಗಳಲ್ಲಿಯೇ ಸಿಲುಕಿಕೊಳ್ಳುವಂತೆ ಮಾಡುತ್ತಾ ದೇವರಕಡೆ ಹೋಗದಂತೆ ಮಾಡುತ್ತಿದೆ.

**ಪ್ರಶ್ನೆ :– ಅಷ್ಟುಬಲವಾದ ಮಾಯೆಯನ್ನು ಜಯಿಸುವುದಕ್ಕೆ ಏನಾದರೂ ಮಾರ್ಗ ಇದೆಯಾ? ಮನುಷ್ಯ ಯಾವ ಮಾರ್ಗವನ್ನು ಅನುಸರಿಸಿದರೆ ಮಾಯೆಯನ್ನು ದಾಟಿ ದೇವರಕಡೆ ಹೋಗುತ್ತಾನೆ?**

**ಉತ್ತರ :–** ಇದಕ್ಕು ಮೊದಲು ಸ್ವಲ್ಪ ಹೇಳಿದ್ದೇವೆ. ಬ್ರಹ್ಮವಿದ್ಯಾಶಾಸ್ತ್ರವನ್ನು ಅತಿಕ್ರಮಿಸಿ ಯಾರು ಪ್ರಯತ್ನಿಸುತ್ತಾನೊ, ಧರ್ಮಶಾಸ್ತ್ರವನ್ನು ತಿಳಿಯದೆ ಅಸಲಾದ ದೇವರನ್ನೇ ನಾವು ಆರಾಧಿಸುತ್ತಿದ್ದೇವೆಂದು ಯಾರು ಅಂದುಕೊಳ್ಳುತ್ತಾರೊ, ಬ್ರಹ್ಮವಿದ್ಯೆಯನ್ನು ಪ್ರಪಂಚ ಲಾಭಗಳಿಗಾಗಿ ಯಾರು ಬಳಸಿಕೊಳ್ಳುತ್ತಾರೊ ಅವರು ಮಾಯೆಯನ್ನು ಜಯಿಸಲಾರರೆಂದು ಹೇಳಿದ್ದೇವೆ. ಅಂತಹವರನ್ನು ಗುಣಗಳು ಭ್ರಮಿಸುವಹಾಗೆ ಮಾಡಿ ತನ್ನದು ಸಕ್ರಮವಾದ ಮಾರ್ಗವೇ ಎನ್ನುವಂತೆ ಮಾಡಿ ದೇವರಕಡೆ ಬಾರದಂತೆ ಮಾಡುತ್ತದೆ. ಇಷ್ಟು ಬಲವಾದ ಮಾಯೆಯನ್ನು ಜಯಿಸುವುದಕ್ಕೆ

ದೇವರೇ ಸ್ವಲ್ಪ ಉಪಾಯವನ್ನು ಸಹಾ ಹೇಳಿದ್ದಾನೆ. ಆ ಉಪಾಯಗಳೆಲ್ಲವೂ ದೈವ ಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಇವೆ.

**ಪ್ರಶ್ನೆ :– ಆ ಮೂರು ಗ್ರಂಥಗಳನ್ನು ದೊಡ್ಡದಾಗಿ ಇಟ್ಟುಕೊಂಡವರು ಸಹಾ ಮುಖ್ಯವಾಗಿ ಅವರ ಮತಗಳನ್ನೇ ದೊಡ್ಡದಾಗಿ ಹೇಳಿಕೊಳ್ಳುವುದು ಎನ್ನುವ ಪ್ರಾಥಮಿಕ ಮಾಯೆಯಲ್ಲಿ ಬಿದ್ದುಹೋಗಿದ್ದಾರೆ. ನಾವು ಆ ಗ್ರಂಥಗಳನ್ನು ಓದಿದರೂ ಅದರಲ್ಲಿ ಮಾಯೆಯನ್ನು ಜಯಿಸುವ ಉಪಾಯವಿದ್ದರೂ ಅದು ನಮಗೆ ಅರ್ಥವಾಗಲಿಲ್ಲ. ಗುರುಗಳಾಗಿರುವವರು ಕೆಲವರು ದೊಡ್ಡವರ ಹತ್ತಿರಕ್ಕೆ, ಸ್ವಾಮೀಜಿಗಳ ಹತ್ತಿರಕ್ಕೆಹೋಗಿ ಮಾಯೆಯನ್ನು ಜಯಿಸುವ ಉಪಾಯವನ್ನು ಹೇಳಿರೆಂದು ಕೇಳಿದರೆ, ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 48, 53 ಶ್ಲೋಕಗಳಲ್ಲಿ ಯಾವ ಕಾರ್ಯಗಳಿಂದ ದೇವರು ತಿಳಿಯುವುದಿಲ್ಲವೊ ಆ ಕಾರ್ಯಗಳನ್ನೇ ಮಾಡಲು ಹೇಳುತ್ತಿದ್ದಾರೆ. ದೇವರು ತನ್ನ ಧರ್ಮಗಳು ಅಲ್ಲವೆಂದು ಏನನ್ನು ಹೇಳಿದ್ದಾನೊ, ಅವುಗಳನ್ನೇ ಕೆಲವರು ಬೋಧಿಸುತ್ತಿದ್ದಾರೆ. ಇದೆಲ್ಲವೂ ನೋಡಿದರೆ ದೇವರನ್ನು ಸೇರುವ ಮಾರ್ಗ ನಮಗೆ ಲಭಿಸುತ್ತದಾ ಎಂದು ಅನುಮಾನ ಬರುತ್ತಿದೆ. ಇಲ್ಲಿಯವರೆಗು ಎಷ್ಟೋ ವಿಷಯಗಳನ್ನು ತೀರ್ಮಾನಿಸಿ ಹೇಳಿದ ನೀವೆ ನಮಗೆ ಅರ್ಥವಾಗುವಂತೆ ಏನಾದರೂ ಉಪಾಯವನ್ನು ತೋರಿಸುತ್ತೀರೆಂದು ಆಶಿಸುತ್ತಿದ್ದೇವೆ?**

**ಉತ್ತರ :–** ನಿನ್ನ ಕೋರಿಕೆ ಒಳ್ಳೆಯದೆ ಆದರೂ, ನಿನ್ನ ಕೋರಿಕೆಯನ್ನು ತೀರಿಸುವ ಸಾಮರ್ಥ್ಯ ನನಗಿದೆಯೆಂದು ನಾನು ಅಂದುಕೊಳ್ಳುತ್ತಿಲ್ಲ. ಏಕೆಂದರೆ! ನಾನು ಹುಟ್ಟಿದಾಗಿನಿಂದ ಎಂದೂ ನಾನು ದೇವರ ಜ್ಞಾನವನ್ನು ತಿಳಿದುಕೊಳ್ಳಲಿಲ್ಲ. ಜೀವನದಲ್ಲಿ ಬದುಕು ಬಾಳ್ವೆಗೋಸ್ಕರವೇ ಕಾಲವೆಲ್ಲಾ ವಿನಿಯೋಗಿಸಲ್ಪಟ್ಟಿದೆ. ನಾನು ಹುಟ್ಟಿರುವುದು ಬಡ ಕುಟುಂಬದಲ್ಲಿ, ಆದ್ದರಿಂದ ಆಹಾರಕ್ಕಾಗಿ ಅಲೆದಾಡುವುದರಲ್ಲಿಯೇ ಕಾಲ ಕಳೆದಿದ್ದೇವೆ. ಆದ್ದರಿಂದ ಯಾರಾದರೂ ನನ್ನನ್ನು ವೇದಗಳು ಓದಿದ್ದೀಯಾ ಎಂದು ಕೇಳಿದರೂ, ಉಪನಿಷತ್ತುಗಳನ್ನು ಓದಿದ್ದೀಯಾ ಎಂದು ಕೇಳಿದರೂ ಇಲ್ಲವೆಂದು ಹೇಳಬೇಕಾಗಿ ಬಂದಿದೆ. ವೇದಗಳು

ಉಪನಿಷತ್ತುಗಳು ಓದದ ನಾನು ಹೇಳುವ ಜ್ಞಾನ ಸರಿಯಾದುದು ಅಲ್ಲವೆಂದು ಬಹಳಜನ ಪಂಡಿತರು ಅನ್ನುವುದು ನಡೆದಿದೆ. ನಾನು ಹೇಳುವ ಜ್ಞಾನದ ಮೇಲೆ ಬಹಳಜನರಿಗೆ ನಂಬಿಕೆ ಇಲ್ಲ. ಆದರೂ ನನ್ನ ಜ್ಞಾನದ ಮೇಲೆ ನನಗೆ ನಂಬಿಕೆಯಿದೆ. ಏಕೆಂದರೆ! ನನಗೆ ನನ್ನಲ್ಲಿನ ಆತ್ಮವೆ ಬೋಧಿಸುವ ವಿಷಯಗಳು ಅಸತ್ಯಗಳು ಅಲ್ಲವೆಂದು ಧೈರ್ಯವಾಗಿ ಹೇಳುತ್ತಿದ್ದೇನೆ. ನಾನು ಹೇಳುವ ಜ್ಞಾನ ನನಗೆ ದೊಡ್ಡದೆ ಆದರೂ ಹೊರಗೆ ನಿಮಗೆ ದೊಡ್ಡದಾಗಿ ಇದೆಯೊ ಇಲ್ಲವೊ, ನಿನಗೆ ನನ್ನ ಜ್ಞಾನದ ಮೇಲೆ ನಂಬಿಕೆಯಿದೆ ಹೇಳಿರೆಂದರೆ ಹೇಳುತ್ತೇನೆ.

**ಪ್ರಶ್ನೆ:– ಭೂಮಿಮೇಲೆ ದೈವಜ್ಞಾನವನ್ನು ಬೋಧಿಸುವವರು ಎಷ್ಟೋ ಜನ ಇದ್ದಾರೆ. ಅವರು ಮುಖ್ಯವಾಗಿ ಅವರ ದೇವರನ್ನು ಕುರಿತು, ಅವರ ಗ್ರಂಥವನ್ನು ಕುರಿತು, ಅವರ ಮತವನ್ನು ಕುರಿತು, ಅವರ ಆರಾಧನೆಗಳನ್ನು ಕುರಿತೇ ಹೇಳುತ್ತಿದ್ದಾರೆ. ಆದ್ದರಿಂದ ಒಂದು ಮತವನ್ನು ಮತ್ತೊಂದು ಮತವೂ, ಒಂದು ಜ್ಞಾನವನ್ನು ಮತ್ತೊಂದು ಜ್ಞಾನ ಖಂಡಿಸುತ್ತಿದೆ. ಅಂತಹದರಲ್ಲಿ ಒಂದು ಸರಿಯಾದುದಾದರೆ ಮತ್ತೊಂದು ಲೋಪದಿಂದ ಕೂಡಿಕೊಂಡಿರುತ್ತದೆಂದು ತಿಳಿಯುತ್ತಿದೆ. ಆದ್ದರಿಂದ ಏನನ್ನು ನಂಬಬೇಕೊ ಏನನ್ನು ನಂಬಬಾರದೊ ನಮಗೆ ಏನೂ ಅರ್ಥವಾಗಲಿಲ್ಲ. ಇವುಗಳೆಲ್ಲವನ್ನು ಗಮನಿಸಿದ ನಂತರ ಎಲ್ಲರಿಗಿಂತ ಬೇರೆಯಾಗಿ ನಿಮ್ಮ ಬೋಧನೆ ಗಳಿರುವುದರಿಂದ ಎಲ್ಲಾ ಮತಗಳಿಗೂ ಸಮಾನದೂರದಲ್ಲಿ ನಿಮ್ಮ ಜ್ಞಾನ ಇರುವುದರಿಂದ, ದೇವರು ಹೇಳಿದ ಧರ್ಮಶಾಸ್ತ್ರವನ್ನೇ ನೀವು ಸಮರ್ಥಿಸುವುದರಿಂದ ಸ್ವಚ್ಛವಾದ ಜ್ಞಾನ, ಸ್ವಚ್ಛವಾದ ಉಪಾಯ ನಿಮ್ಮ ಹತ್ತಿರವೇ ಲಭಿಸುತ್ತದೆಂದು ಅಂದುಕೊಳ್ಳುತ್ತಿದ್ದೇನೆ. ಆದ್ದರಿಂದ ನೀವು ಹೇಳುವ ಜ್ಞಾನವನ್ನೇ ವಿಶ್ವಾಸಿ ಸುತ್ತಿದ್ದೇನೆಂದು, ನಮಗೆ ಮಾಯೆಯನ್ನು ಜಯಿಸುವ ಉಪಾಯವನ್ನು ತಿಳಿಸಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ನಾನು ನಿನಗೆ ಹೇಳುವ ಜ್ಞಾನ ನನಗೆ ನನ್ನ ಆತ್ಮ ಉಚಿತವಾಗಿ ತಿಳಿಸಿದೆ. ಆದ್ದರಿಂದ ನಾನು ನಿನಗೆ ಉಚಿತವಾಗಿ ತಿಳಿಸುತ್ತೇನೆ. ಉಚಿತವಾದು

ದೆಂದು ಈ ಬೋಧನೆಯನ್ನು ಕೇವಲವಾಗಿ ನೋಡಬೇಡ. ಬಹಳ ಬೆಲೆಯುಳ್ಳದಾಗಿ ಭಾವಿಸಿ ತಿಳಿದುಕೊಳ್ಳಿರಿ. ಮಾಯೆ ಎನ್ನುವುದು ಗುಣಗಳ ಪ್ರಭಾವವೆಂದು ಅರ್ಥಮಾಡಿಕೊಂಡಿದ್ದೇವೆ. ಇದಕ್ಕೆ ಸಾಕ್ಷಿಯಾಗಿ ಭಗವದ್ಗೀತೆಯಲ್ಲಿ "ಗುಣಮಯೀ ಮಮ ಮಾಯಾ" ಎಂದು ಹೇಳಿದ್ದಾನೆ. ಆದ್ದರಿಂದ ಮಾಯೆ ಎಂಬ ಪದವನ್ನು ಕೇಳುತ್ತಲೇ ಮನುಷ್ಯನ ಶರೀರದಲ್ಲಿನ ಗುಣಗಳು ಜ್ಞಾಪಕಬರುತ್ತಿವೆ. ಗುಣಗಳನ್ನು ಜಯಿಸಿದರೆ ಮಾಯೆಯನ್ನು ಜಯಿಸಿದಂತಾ ಗುತ್ತದೆ. ಅವುಗಳನ್ನು ಜಯಿಸಬೇಕೆಂದರೆ ಅವುಗಳಿಗೆ ಸಂಬಂಧಿಸಿದ ವಿಷಯವೆಲ್ಲಾ ಸಂಪೂರ್ಣವಾಗಿ ತಿಳಿದಿರಬೇಕು. ಗುಣಗಳನ್ನು ಕುರಿತು ಅವು ಒಟ್ಟಾರೆ 108 ಭಾಗಗಳಾಗಿ ವಿಭಜಿಸಲ್ಪಟ್ಟಿವೆಯೆಂದು, ಅದರಲ್ಲಿ ಒಂದು ಗುಣ ಮನುಷ್ಯನ ಬುದ್ಧಿಯನ್ನು ತಾಕಿದರೂ ಅದು ಹನ್ನೆರಡು ಪಟ್ಟು ಗುಣಿಸಲ್ಪಡುತ್ತದೆಂದು ಸಹ ಹೇಳಿಕೊಂಡಿದ್ದೇವೆ. ಮನುಷ್ಯನನ್ನು ಅಷ್ಟು ವಿಧಗಳಾಗಿ ಆಡಿಸುವುದರಲ್ಲಿ ಮುಖ್ಯಪಾತ್ರ ಪೋಷಿಸುತ್ತಿವೆಯೆಂದು ಸಹಾ ಹೇಳಿಕೊಂಡಿದ್ದೇವೆ. ಅಂತಹ ಬಲವಾದ ಗುಣಗಳನ್ನು ಅಥವಾ ಬಲವಾದ ಮಾಯೆಯನ್ನು ಜಯಿಸುವುದಕ್ಕೆ ಮೂರು ದೈವ ಗ್ರಂಥಗಳು ಒಂದೇ ವಿಧಾನವನ್ನು ತಿಳಿಸುತ್ತಿವೆ. ಮೂರು ಗ್ರಂಥಗಳಲ್ಲಿ ಹೇಳಲಾದ ಧರ್ಮಶಾಸ್ತ್ರವನ್ನು ತಿಳಿದುಕೊಳ್ಳುವುದರಿಂದ ಮಾಯೆ ಯನ್ನು ಸುಲಭವಾಗಿ ಜಯಿಸಬಹುದು.

ಮಾಯೆಯನ್ನು ತಯಾರು ಮಾಡಿದವನು ದೇವರೆ. ಆದ್ದರಿಂದ ಮಾಯೆಯನ್ನು ಜಯಿಸುವ ಉಪಾಯವನ್ನು ಸಹಾ ದೇವರೆ ಹೇಳಬೇಕಾಗಿದೆ. ಆದ್ದರಿಂದ ದೇವರು ಹೇಳಿರುವುದು ಅಸಲಾದ ಉಪಾಯವಾಗಿ ನಾವು ತಿಳಿದುಕೊಳ್ಳಬೇಕು. ದೇವರು ಮೊದಲು ಮನುಷ್ಯರಿಗೆ ಗುಣಗಳೆಂಬ ಮಾಯೆಯನ್ನು ಕಲ್ಪಿಸಿ ಅದರ ನಂತರ ಮಾಯೆಗೆ ಔಷಧಿಯಂತಹ ಜ್ಞಾನವನ್ನು ಸಹಾ ಮನುಷ್ಯನಿಗೆ ತಿಳಿಸಿದ್ದಾನೆ. ಇದಕ್ಕು ಮೊದಲು ಗುಣ ಎನ್ನುವುದಕ್ಕೆ ಹೆಚ್ಚಿಸಲ್ಪಡುವುದೆಂದು (ಗುಣಿಸಲ್ಪಡುವುದೆಂದು) ಅರ್ಥವನ್ನು ಹೇಳಿಕೊಂಡಿದ್ದೇವೆ. ಗುಣ ಯಾವುದಾದರೂ ಅದರ ಸ್ವಭಾವದ ಪ್ರಕಾರ ಇಲ್ಲದಿರುವುದನ್ನು ಕಲ್ಪಿಸಿ

ಚಿಕ್ಕದನ್ನು ದೊಡ್ಡದನ್ನಾಗಿ ಮಾಡುತ್ತದೆ. ಗುಣದಿಂದ ಸೇರಿದ ಯಾವ ವಿಷಯವಾದರೂ ಅದು ಬೆಳೆಯುವುದಕ್ಕೆ ಆರಂಭಿಸುತ್ತದಾಗಲಿ ಸ್ಥಗಿತವಾಗುವುದಿಲ್ಲ. ಮನುಷ್ಯನ ತಲೆಯಲ್ಲಿರುವ ಹನ್ನೆರಡು ಗುಣಗಳು ಹನ್ನೆರಡು ವಿಧಗಳ ವ್ಯಾಪಕಗಳನ್ನು ಕಲ್ಪಿಸುತ್ತಿವೆ. ಆ ಹನ್ನೆರಡು ವಿಧಗಳ ವ್ಯಾಪಕದಲ್ಲಿಯೇ ಮನುಷ್ಯನ ಜೀವನವೆಲ್ಲಾ ಅಡಕವಾಗಿದೆ. ಈ ವಿಧವಾಗಿ ಗುಣ ಎಂದರೆ ಗುಣಿಸಲ್ಪಡುವುದೆಂದು ಅಥವಾ ಹೆಚ್ಚಿಸಲ್ಪಡುವುದೆಂದು ತಿಳಿಯುತ್ತಿದೆ.

ಮಾಯೆಗೆ ವಿರುದ್ಧವಾದುದು ಧರ್ಮ. ಮಾಯೆ ವಿಸ್ತಾರವಾಗಿ ವ್ಯಾಪಿಸುವಂತೆಮಾಡುವುದಾದರೆ ಧರ್ಮ ಎನ್ನುವುದು ಇರುವುದನ್ನು ಇಲ್ಲದ ಹಾಗೆ ಮಾಡುವುದು. ಧಮ್ ಎಂಬ ಶಬ್ಧದಿಂದ ಧರ್ಮ ಎಂಬ ಶಬ್ಧ ಹುಟ್ಟಿದೆ. ಧಮ್ ಎಂದರೆ ನಾಶ ಎಂದು ಅರ್ಥ. ಧರ್ಮ ಎಂದರೆ ಎಲ್ಲದಕ್ಕೂ ಕಾರಣವಾದ ಕರ್ಮವನ್ನು ಇಲ್ಲದಹಾಗೆ ಮಾಡುವುದೆಂದು ಅರ್ಥ. ಗುಣ ಇದ್ದರೆ ಅದಕ್ಕೆ ಅನುಬಂಧವಾಗಿ ಕರ್ಮ ಇರುತ್ತದೆ. ಗುಣ ಇಲ್ಲದೆಹೋದರೆ ಕರ್ಮ ಸಹಾ ಇಲ್ಲವೆಂದು ಅರ್ಥ. ಯಾವ ಗುಣವಾದರೆ ಮಾಯೆಯಾಗಿ ಹೇಳಲ್ಪಡುತ್ತಿದೆಯೊ, ಆ ಗುಣಗಳನ್ನು ಸ್ಥಗಿತಗೊಳಿಸುವುದೇ ಧರ್ಮ. ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 32ನೇ ಶ್ಲೋಕದಲ್ಲಿ ದೇವರಾದ ಭಗವಂತನು ತನ್ನನ್ನು ಕುರಿತು ಹೇಳುತ್ತಾ ಹೀಗೆಂದಿದ್ದಾನೆ. "ಕಾಲೋಸ್ಮಿ ಲೋಕ ಕ್ಷಯ" ಲೋಕವನ್ನು ನಾಶಮಾಡುವವನು ಎಂದು ಅದರ ಅರ್ಥ. ದೇವರು ನಾಶ ಮಾಡುವವನೆಂದೇ ಹೇಳಿಕೊಂಡಿದ್ದಾನೆ. ಅಂತಹ ದೇವರಿಗೆ ಸಂಬಂಧಿಸಿದ ಧರ್ಮ ನಾಶ ಮಾಡುವುದಾಗಿದೆ. ಆದ್ದರಿಂದ ಧರ್ಮ ಎಂದರೆ ನಾಶ ಎಂದು ಅರ್ಥ ಇದೆ. ಇನ್ನೂ ವಿವರವಾಗಿ ಹೇಳಿಕೊಂಡರೆ ಲೋಕ ಎಂದರೆ ಗುಣಭಾಗವೆಂದು ಅರ್ಥ. ಮೂರು ಲೋಕಗಳು ಅಂದರೆ ಮೂರು ಗುಣ ಭಾಗಗಳೆಂದು ಅರ್ಥ. ತಾಮಸ, ರಾಜಸ, ಸಾತ್ತ್ವಿಕ ಗುಣಭಾಗಗಳನ್ನು ಆಧ್ಯಾತ್ಮಿಕ ವಿದ್ಯೆಯಲ್ಲಿ ಮೂರುಲೋಕಗಳೆನ್ನುವುದು ಇದೆ. ಮೂರು ಗುಣ ಭಾಗದಲ್ಲಿನ 108 ಗುಣಗಳನ್ನು ನಾಶ ಮಾಡುವ ವಿಧಾನವನ್ನು ಧರ್ಮ ಅನ್ನುತ್ತೇವೆ. ಇರುವುದನ್ನು ಇಲ್ಲದಹಾಗೆ

ಮಾಡುವುದೆ ಮುಖ್ಯವಾದ ಕರ್ತವ್ಯವಾಗಿ ಇಟ್ಟುಕೊಂಡ ದೇವರ ವಿಧಾನವನ್ನು ಧರ್ಮ ಅನ್ನುತ್ತಿದ್ದೇವೆ. ಮನುಷ್ಯನ ಕರ್ಮವನ್ನೂ, ಗುಣಗಳನ್ನೂ ಇಲ್ಲದಂತೆ ಮಾಡುವ ವಿಧಾನವನ್ನು ದೇವರ ಧರ್ಮ ಅನ್ನುತ್ತಿದ್ದೇವೆ.

ಧರ್ಮಶಾಸ್ತ್ರ ಎಂದರೆ ನಿನ್ನನ್ನು, ನನ್ನನ್ನು, ಸರ್ವವನ್ನು ಇಲ್ಲದಹಾಗೆ ಮಾಡುವ ಶಾಸನಗಳಿಂದ ಕೂಡಿಕೊಂಡಿರುವುದು ಧರ್ಮಶಾಸ್ತ್ರ. ಮಾಯೆ ಎಂದರೆ ಕರ್ಮವನ್ನು ಬೆಳೆಸಿ, ಜಗತ್ತನ್ನು ವೃದ್ಧಿ ಮಾಡುವುದಾಗಿದೆ. ಅದಕ್ಕೆ ವಿರುದ್ಧವಾಗಿ ಏರ್ಪಟ್ಟಿರುವುದೆ ಧರ್ಮಶಾಸ್ತ್ರ. ಧರ್ಮಶಾಸ್ತ್ರದಲ್ಲಿ ನಿನ್ನನ್ನು ನೀನು ಇಲ್ಲದ ಹಾಗೆ ಮಾಡಿಕೊಳ್ಳುವ ವಿಧಾನ ಇದೆ. ಈ ಮಾತುಗಳು ಕೇಳುತ್ತಿರುವ ನಿಮಗೆ ಸ್ವಲ್ಪ ಆಶ್ಚರ್ಯ ಉಂಟಾಗಬಹುದು. ಏಕೆಂದರೆ ಮಾಯೆಯನ್ನು ಜಯಿಸುವುದಕ್ಕೆ ಯಾವ ಜ್ಞಾನವೊ, ಯೋಗವೊ, ಭಕ್ತಿ ಮಾರ್ಗವೊ, ಆರಾಧನ ಕ್ರಮವೊ, ಆಚರಣ ವಿಧಾನವೊ ಬೋಧಿಸುತ್ತಾನೆಂದುಕೊಂಡರೆ ನಾಶವನ್ನು ಕುರಿತು ಹೇಳುತ್ತಿದ್ದಾನೆಂದುಕೊಳ್ಳಬಹುದು. ದೇವರ ವಿಧಾನದಲ್ಲಿ ನೀವು ಅಂದುಕೊಂಡ ಭಕ್ತಿ, ಆರಾಧನೆ, ಆಚರಣೆಗಳು ಇಲ್ಲ. ದೇವರ ವಿಧಾನವೆಲ್ಲವೂ ಧರ್ಮಯುಕ್ತವಾಗಿದೆ. ಗುಣಗಳು ಹೆಚ್ಚಿಸಿದಾಗ ಅದಕ್ಕೆ ವಿರುದ್ಧವಾಗಿ ಕ್ಷೀಣಿಸುವಂತೆ ಮಾಡುವುದೆ ಧರ್ಮವೊಂದರ ವಿಧಿ ವಿಧಾನವಾಗಿದೆ.

ಆಯುಧಮ್ ಎಂದರೆ ಮನುಷ್ಯನೊಂದರ ಆಯುಸ್ಸನ್ನು ನಾಶ ಮಾಡುವುದೆಂದು ಅರ್ಥ. ಈ ಪದದಲ್ಲಿ ಆಯು ಎಂದರೆ ಆಯಸ್ಸು ಎಂದೂ, ಧಮ್ ಎಂದರೆ ನಾಶ ಎಂದು ಅರ್ಥ. ಆಯಸ್ಸನ್ನು ಇಲ್ಲದಹಾಗೆ ಮಾಡುವ ಕತ್ತಿಯನ್ನು ಆಯುಧಮ್ ಅನ್ನುತ್ತೇವೆ. ಮನುಷ್ಯನನ್ನು ಇರಿದು ಸಾಯಿಸುವ ಕತ್ತಿಯನ್ನು ಆಯಸ್ಸನ್ನು ಇಲ್ಲದಹಾಗೆ ಮಾಡುವುದು ಆಗಿರುವುದರಿಂದ ಆಯುಧಮ್ ಎನ್ನುವ ಶಬ್ಧವನ್ನು ಉಪಯೋಗಿಸಿ ಹೇಳಿದ್ದಾರೆ. ಇದರಲ್ಲಿ 'ಧಮ್' ಎಂಬ ಪದ ನಾಶವನ್ನು ಸೂಚಿಸುತ್ತಿದೆ. 'ಧಮ್' ಎಂಬ ಶಬ್ಧದಿಂದ ಹುಟ್ಟಿರುವುದು ಧರ್ಮ. ದೇವರ ವಿಧಾನವೆಲ್ಲವೂ ಇಲ್ಲದಂತೆ ಮಾಡುವುದೆ

ಆಗಿರುವುದರಿಂದ, ದೇವರು ಧರ್ಮದಿಂದ ಕೂಡಿಕೊಂಡವನೆಂದು ಹೇಳುತ್ತಿದ್ದಾರೆ. ಅಂತಹ ದೇವರನ್ನು ತಿಳಿಯುವುದಕ್ಕೆ ಧರ್ಮಗಳು ತಿಳಿಯಬೇಕು. ಧರ್ಮವನ್ನು ಕುರಿತು ತಿಳಿದರೆ ನಾಶ ಮಾಡುವ ದೇವರು ಹೇಗಿರುವುದು ತಿಳಿಯುತ್ತದೆ. ಆದ್ದರಿಂದ ದೇವರನ್ನು ತಿಳಿಯುವುದಕ್ಕೆ ಧರ್ಮವನ್ನು ಶಾಸ್ತ್ರಬದ್ಧವಾಗಿ ತಿಳಿಯಬೇಕು. ಹಾಗೆ ದೇವರ ಶಾಸನಗಳಿಂದ ಕೂಡಿಕೊಂಡಿರುವುದೇ ಧರ್ಮಶಾಸ್ತ್ರ.

ಪ್ರಪಂಚವನ್ನು ವೃದ್ಧಿಮಾಡುತ್ತಾ, ಜನ್ಮಗಳನ್ನುಂಟುಮಾಡುತ್ತಾ ಮನುಷ್ಯರನ್ನು ಬೆಳೆಸಿ ದೊಡ್ಡ ಪ್ರಪಂಚವನ್ನಾಗಿ ಮಾಯೆ ಮಾಡಿದೆ. ಅಂತಹ ಪ್ರಪಂಚದಲ್ಲಿ ನಾವೆಲ್ಲರೂ ಇದ್ದೇವೆ. ನಮಗೆ ಜನ್ಮಗಳು ಇಲ್ಲದಂತೆಹೋಗಿ ಜನ್ಮರಾಹಿತ್ಯವನ್ನು ಹೊಂದಿ, ಜಗತ್ತಿನಲ್ಲಿ ಇಲ್ಲದಂತೆ ಹೋಗುವುದಕ್ಕೆ ದೇವರ ಧರ್ಮಗಳನ್ನು ತಿಳಿಯಬೇಕು. ದೇವರ ಧರ್ಮಗಳಿರುವುದೇ ಧರ್ಮಶಾಸ್ತ್ರ. ದೇವರಿಗೆ ಸಂಬಂಧಿಸಿದ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಧರ್ಮ ಶಾಸ್ತ್ರ ಪೂರ್ತಿಯಾಗಿ ಅಡಕವಾಗಿದೆ. ಆದ್ದರಿಂದ ಆ ಮೂರು ಗ್ರಂಥಗಳನ್ನು ದೈವ ಗ್ರಂಥಗಳೆಂದು ಅನ್ನುತ್ತಿದ್ದೇವೆ. ಆ ಮೂರು ಗ್ರಂಥಗಳಲ್ಲಿ ಕರ್ಮವನ್ನು ಇಲ್ಲದಹಾಗೆ ಮಾಡಿಕೊಳ್ಳುವ ವಿಧಾನವೆ ಇದೆ. ಎಲ್ಲದಕ್ಕು ಕಾರಣವಾದ ಕರ್ಮ ಇಲ್ಲದಂತಾದರೆ ಕರ್ಮದಿಂದ ಬರುವ ಗುಣಗಳು ಸಹಾ ಇಲ್ಲದಹಾಗೆಹೋಗುತ್ತವೆ. ಗುಣಗಳು ಇಲ್ಲದಹಾಗೆಹೋದರೆ ಗುಣಗಳ ಪ್ರಭಾವದಿಂದ ಕೂಡಿಕೊಂಡ ಮಾಯೆ ಸಹಾ ಇಲ್ಲದಹಾಗೆ ಹೋಗುತ್ತದೆ. ಮಾಯೆ ಇಲ್ಲದಿರುವಾಗ ದೇವರೆ ಉಳಿದುಹೋಗುತ್ತಾನೆ. ಮಾಯೆ ಇಲ್ಲದ ಸಮಯದಲ್ಲಿ ಮನುಷ್ಯನ ಶರೀರದಲ್ಲಿಯೇ ಇರುವ ದೇವರು ಮನುಷ್ಯನಿಗೆ ತಿಳಿಯುತ್ತಾನೆ. ಅಂತಹವನು ಜಗತ್ತಿನಲ್ಲಿ ಇಲ್ಲದಂತೆಹೋಗಿ ಪರಮದಲ್ಲಿ ಸೇರಿಹೋಗುತ್ತಾನೆ, ಎಂದರೆ ಮೋಕ್ಷ ಹೊಂದುತ್ತಾನೆ. ಧರ್ಮಶಾಸ್ತ್ರ ಎಂದರೆ ಎಲ್ಲರೂ ಊಹಿಸಿಕೊಂಡಹಾಗೆ ಇಲ್ಲ.

ಸೃಷ್ಟಿ ಇರುವವರೆಗು ಎಲ್ಲರಿಗೂ ದೇವರ ಧರ್ಮಗಳು ತಿಳಿಯುವುದಕ್ಕೆ ಧರ್ಮಗಳು ಗ್ರಂಥರೂಪವಾಗಿವೆ. ಧರ್ಮಶಾಸ್ತ್ರ ಮೂರು ಗ್ರಂಥಗಳ ರೂಪದಲ್ಲಿದೆ. ಆದ್ದರಿಂದ ಮೂರು ಗ್ರಂಥಗಳನ್ನು ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳೆಂದು ಹೇಳಬಹುದು. ಶಾಸ್ತ್ರ ಎಂದರೆ ಶಾಸನಗಳಿಂದ ಕೂಡಿಕೊಂಡಿರುವುದೆಂದು ಅರ್ಥ. ಇಲ್ಲಿ ಶಾಸ್ತ್ರ ಬೇರೆ, ಗ್ರಂಥವು ಬೇರೆಯಾಗಿ ಹೇಳುವುದಾಗಿದೆ. ಶರೀರ ದಲ್ಲಿರುವ ಗ್ರಂಥಿಯನ್ನು ಉತ್ತೇಜಪಡಿಸುವುದು ಗ್ರಂಥ. ಶರೀರದಲ್ಲಿರುವ ದೈವವನ್ನು ತಿಳಿಸುವುದು ಧರ್ಮಶಾಸ್ತ್ರ. ಶರೀರದಲ್ಲಿನ ಕಣ್ಣೀರಿನ ಗ್ರಂಥಿಯನ್ನು ಪ್ರೇರೇಪಿಸುವ ವಿಷಯಗಳಿರುವ ಪುಸ್ತಕವನ್ನು ಗ್ರಂಥ ಎಂದು ಅನ್ನಬಹುದು. ಅಂತಹ ಗ್ರಂಥವನ್ನು ಓದಿದಾಗ ಆನಂದಭಾಷ್ಪಗಳು ಕಣ್ಣಿನಿಂದ ಬರುತ್ತವೆ. ಧರ್ಮಶಾಸನಗಳಿರುವ ಯಾವುದಾದರೂ ಗ್ರಂಥವೇ ಆಗುತ್ತದೆ. ಆ ಗ್ರಂಥ ಮನುಷ್ಯನಲ್ಲಿ ಹೊಸ ಉತ್ತೇಜವನ್ನು ತುಂಬಿ ದೈವವನ್ನು ತಿಳಿಯುವುದಕ್ಕೆ ಸಹಕರಿಸುತ್ತದೆ. ನಾವು ಬರೆದ ವಿಷಯಗಳು ಧರ್ಮಕ್ಕೆ ಸಂಬಂಧಿಸಿರುವ ವಾದ್ದರಿಂದ ನಾವು ಬರೆದಿರುವ ವೆಲ್ಲವೂ ಗ್ರಂಥವೆ ಆಗಿರುತ್ತವೆ. ಈ ಚಿಕ್ಕ ಬರಹದಲ್ಲಿ ಮುಖ್ಯವಾದ ಧರ್ಮ ಗಳಿರುವುದರಿಂದ ಇದು ಗ್ರಂಥವೇ, ಧರ್ಮಶಾಸ್ತ್ರವೇ.

**ಮುಕ್ತಾಯ**



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೂ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

*****

**ಅಸತ್ಯವನ್ನು ಸಾವಿರಮಂದಿ ಹೇಳಿದರೂ ಅದು ಸತ್ಯವಾಗುವುದಿಲ್ಲ, ಸತ್ಯವನ್ನು ಸಾವಿರಮಂದಿ ಅಲ್ಲವೆಂದರೂ ಅದು ಅಸತ್ಯವಾಗುದಿಲ್ಲ.**



ಸವಿವರವಾಗಿ ತಿಳಿಸಿದ್ದಾರೆ. ಈದಿನ ದಕ್ಷಿಣ ಭಾರತದೇಶಕ್ಕೆ ಪರಿಮಿತವಾದ ದ್ರಾವಿಡರ ಮೇಲೆ ಆಕ್ರಮಿಸಿಕೊಂಡ ಆರ್ಯ ಜಾತಿ ಇಂದಿಗೂ ಆಧಿಪತ್ಯ ನಡೆಸುತ್ತಿರುವುದೆಂಬ ನಗ್ನ ಸತ್ಯ ತಿಳಿಯಬಹುದು. ಮಾನವಾಕಾರದಲ್ಲಿರುವ ಭಾರತದೇಶದ ಚಿತ್ರ ಪಟ ಗ್ರಂಥದೊಳಗೆ, ಪಾಠಕರನ್ನು ನಿಶ್ಚೇಷ್ಟರಾಗಿ ಮಾಡುವುದು.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧ**

ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.




# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org



*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ-500007.

e-mail id : info@ravanabrahmadravidabrahmanasangham.org

***www.ravanabrahmadravidabrahmanasangham.org***

# ಧರ್ಮಶಾಸ್ತ್ರ ಯಾವುದು?



Author :
The Only Guru of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org